CASE STUDY

# **ಶಿಕ್ಷಣದಲ್ಲಿನ ವಿಷಯ ಅಧ್ಯಯನ ವಿಧಾನಗಳಿಗೆ ಮೂರು ಕಾರ್ಯವಿಧಾನಗಳು:**

## **ಯಿನ್, ಮೆರಿಯಮ್ ಮತ್ತು ಸ್ಟೇಕ್**

**ಬೆಡ್ರೆಟ್ಟಿನ್ ಯಜûನ್**

**ಅಲಬಾಮ ವಿಶ್ವವಿದ್ಯಾನಿಲಯ, ಟುಸ್ಕಲೂಸಾ, ಅಲಬಾಮ.**

ಸಮಾಜ–ವಿಜ್ಞಾನಗಳ ಸಂಶೋಧನೆಯಲ್ಲಿ ವಿಷಯ ಅಧ್ಯಯನ ವಿಧಾನವು ಬಹಳ ಹಿಂದಿನಿಂದಲೂ ವಿವಾದದ ಕ್ಷೇತ್ರವಾಗಿದೆ. ಈ ವಿಧಾನವು; ಅನೇಕ ಸಂಶೋಧಕರಿಂದ ಬೆಂಬಲಿಸಲ್ಪಟ್ಟ ಪರಿವರ್ತಿತ ಹಾಗೂ ಕೆಲವೊಮ್ಮೆ ಪ್ರತಿರೋಧಿತ ಕಾರ್ಯವಿಧಾನಗಳ ಗುಣಲಕ್ಷಣವನ್ನು ಒಳಗೊಂಡಿದೆ. ಬದಲಾಗುವ, ಕೆಲವೊಮ್ಮೆ ವಿರೋಧಿಸುವ ಕಾರ್ಯವಿಧಾನಗಳ ಲಕ್ಷಣವನ್ನು ಒಳಗೊಂಡಿದ್ದು, ಅನೇಕ ಸಂಶೋಧಕರು ಇದನ್ನು ಸಮರ್ಥಿಸಿದ್ದಾರೆ. ಶೈಕ್ಷಣಿಕ ಸಂಶೋಧನೆಯಲ್ಲಿ ಅತ್ಯಂತ ಹೆಚ್ಚು ಸಲ ಉಪಯೋಗಿಸಲ್ಪಡುವ ಗುಣಾತ್ಮಕ ಸಂಶೋಧನಾ ವಿಧಾನಗಳಲ್ಲಿ ಇದು ಒಂದಾಗಿದ್ದರೂ ವಿಷಯ ಅಧ್ಯಯನದ ವಿನ್ಯಾಸ ಹಾಗೂ ಅನುಷ್ಠಾನದ ಬಗ್ಗೆ ವಿಧಾನಶಾಸ್ತ್ರಜ್ಞರಲ್ಲಿ ಪೂರ್ಣ ಒಮ್ಮತವಿಲ್ಲ. ಈ ಕಾರಣದಿಂದಾಗಿ ಈ ವಿಧಾನದ ಪೂರ್ಣ ವಿಕಸನಕ್ಕೆ ತಡೆಯುಂಟಾಗಿದೆ. ಮೂರು ಪ್ರಮುಖ ವಿಧಾನಶಾಸ್ತ್ರಜ್ಞರಾದ ರಾಬರ್ಟ್ ಯಿನ್, ಶರನ್ ಮೆರಿಯಮ್ ಹಾಗೂ ರಾಬರ್ಟ್ ಸ್ಟೇಕ್ ಇವರ ಹೆಗ್ಗುರುತಿನ ಕೃತಿಗಳ ಮೇಲೆ ಗಮನವನ್ನು ಕೇಂದ್ರೀಕರಿಸುವ ಮೂಲಕ ವಿಷಯ ಅಧ್ಯಯನ ಸಂಶೋಧನೆಯ ವಿಭಿನ್ನ ಆಯಾಮಗಳಿಗೆ ಸಂಬಂಧಿಸಿದಂತೆ ಈ ಮೂವರ ದೃಷ್ಟಿಕೋನಗಳು ಎಲ್ಲಿ ಭಿನ್ನವಾಗಿವೆ, ಒಮ್ಮುಖವಾಗಿವೆ ಹಾಗೂ ಒಂದಕ್ಕೊಂದು ಪೂರಕವಾಗಿವೆ ಎಂಬುದನ್ನು ಪರಿಶೀಲಿಸಲು ನಾನು ಪ್ರಯತ್ನಿಸಿದ್ದೇನೆ. ಶಿಕ್ಷಣ ಕ್ಷೇತ್ರದಲ್ಲಿನ ಉದಯೋನ್ಮುಖ ಸಂಶೋಧಕರಿಗೆ ವಿಷಯ ಅಧ್ಯಯನಕ್ಕೆ ಸಂಬಂಧಿಸಿದ ಅನೇಕ ತಂತ್ರಗಳು ಹಾಗೂ ಕರ್ಯನೀತಿಗಳನ್ನು ಪರಿಚಯಿಸುವ ಮೂಲಕ ಅವರಿಗೆ ಸಹಾಯ ಮಾಡುವುದು ನನ್ನ ಉದ್ದೇಶವಾಗಿದೆ. ಆ ಮೂಲಕ ಅವರು ತಮ್ಮ ಸಂಶೋಧನಾ ಉದ್ದೇಶಕ್ಕೆ ಅತ್ಯಂತ ಸೂಕ್ತವೆನಿಸುವ ಸಂಯುಕ್ತ ದೃಷ್ಟಿಕೋನವನ್ನು ರೂಪಿಸಿಕೊಳ್ಳಬಹುದು.

**ಪ್ರಮುಖ ಪದಗಳು :**

**ಗುಣಾತ್ಮಕ ಸಂಶೋಧನೆ, ವಿಷಯ ಅಧ್ಯಯನ ವಿಧಾನಗಳು, ಜ್ಞಾನಶಾಸ್ತ್ರೀಯ ಆಧಾರಗಳು.**

---

ವಿಷಯ ಅಧ್ಯಯನವು ಅತ್ಯಂತ ಹೆಚ್ಚು ಸಲ ಉಪಯೋಗಿಸಲ್ಪಡುವ ಗುಣಾತ್ಮಕ ಸಂಶೋಧನಾ ವಿಧಾನಗಳಲ್ಲಿ ಒಂದು. ಆದಾಗ್ಯೂ, ಸಮಾಜವಿಜ್ಞಾನ ಸಂಶೋಧನಾ ಕಾರ್ಯತಂತ್ರವಾಗಿ ಇದಕ್ಕೊಂದು ವಿಧಿವತ್ತಾದ ಸ್ಥಾನಮಾನವಿನ್ನೂ ದೊರೆತಿಲ್ಲ. ಇದಕ್ಕೆ ಕಾರಣವೇನೆಂದರೆ ಇದು ಸೂಕ್ತವಾಗಿ ವ್ಯಾಖ್ಯಾನಿಸಲ್ಪಟ್ಟಿರುವ ಹಾಗೂ ಉತ್ತಮವಾದ ಸಂರಚನೆಯುಳ್ಳ ಶಿಷ್ಟಾಚಾರಗಳನ್ನು (Protocols) ಹೊಂದಿರುವುದಿಲ್ಲ (ಯಿನ್, 2002). ಹೀಗಾಗಿ ವಿಷಯ ಅಧ್ಯಯನವನ್ನು ಉಪಯೋಗಿಸಲು ಬಯಸುವ ಉದಯೋನ್ಮುಖ ಸಂಶೋಧಕರು, "ವಿಷಯ ಅಧ್ಯಯನ ಎಂದರೇನು ಮತ್ತು ಇತರೆ ಗುಣಾತ್ಮಕ ಸಂಶೋಧನಾ ವಿಧಾನಗಳಿಂದ ಇದು ಹೇಗೆ ಭಿನ್ನವಾಗಿದೆ" ಎಂಬುದರ ಬಗ್ಗೆ ಗೊಂದಲಕ್ಕೀಡಾಗುತ್ತಾರೆ (ಮೆರಿಯಮ್, 1998). ವಿಷಯ ಅಧ್ಯಯನದ ವಿನ್ಯಾಸ ಮತ್ತು ಅನುಷ್ಠಾನದ ಬಗ್ಗೆ ಸಂಶೋಧನಾ ವಿಧಾನಶಾಸ್ತ್ರಜ್ಞರಲ್ಲಿ ಒಮ್ಮತವಿಲ್ಲ. ಇದು, ಈ ವಿಧಾನವನ್ನು ವಿವಾದಾಸ್ಪದವಾಗಿಸುವುದರ ಜೊತೆಗೆ ಇದರ ಪೂರ್ಣ ವಿಕಸನಕ್ಕೆ ಅಡ್ಡಿಯಾಗಿದೆ. ಈ ಲೇಖನದಲ್ಲಿ, ಶೈಕ್ಷಣಿಕ ಸಂಶೋಧನಾ ಕ್ಷೇತ್ರದಲ್ಲಿ ವಿಷಯ ಅಧ್ಯಯನ ವಿಧಾನದ ಬಳಕೆಯನ್ನು ಕುರಿತು ಮೂರು ಪ್ರಮುಖ ವಿಧಾನಶಾಸ್ತ್ರಜ್ಞರಾದ ರಾಬರ್ಟ್ ಕೆ. ಯಿನ್, ಶರನ್ ಮೆರಿಯಮ್ ಮತು ರಾಬರ್ಟ್ ಇ. ಸ್ಟೇಕ್ ಇವರುಗಳು ಹೊಂದಿರುವ ವಿಭಿನ್ನ ದೃಷ್ಟಿಕೋನಗಳ ವಿಶ್ಲೇಷಣೆ ಹಾಗೂ ಸಂಕಲನವನ್ನು ಪ್ರಸ್ತುತಪಡಿಸುವ ಉದ್ದೇಶ ನನ್ನದಾಗಿದೆ. ಇವರ ಈ ಮುಂದಿನ ಕೃತಿಗಳ ಮೇಲೆ ನನ್ನ ಗಮನವನ್ನು ಕೇಂದ್ರೀಕರಿಸುತ್ತೇನೆ: ರಾಬರ್ಟ್ ಕೆ. ಯಿನ್‌ನ 'ಕೇಸ್ ಸ್ಟಡಿ ರೀಸರ್ಚ್: ಡಿಸೈನ್ ಅಂಡ್ ಮೆಥಡ್ಸ್' (2002), ಶರನ್ ಬಿ. ಮೆರಿಯಮ್‌ನ 'ಕ್ವಾಲಿಟೇಟಿವ್ ರೀಸರ್ಚ್ ಅಂಡ್ ಕೇಸ್ ಸ್ಟಡಿ ಅಪ್ಲಿಕೇಷನ್ಸ್ ಇನ್ ಎಜುಕೇಷನ್' (1998) ಹಾಗೂ ರಾಬರ್ಟ್ ಇ ಸ್ಟೇಕ್‌ನ 'ದಿ ಆರ್ಟ್ ಆಫ್ ಕೇಸ್ ಸ್ಟಡಿ ರೀಸರ್ಚ್' (1995).

ಈ ಮೂರು ವಿಧಾನಶಾಸ್ತ್ರಜ್ಞರು ಹಾಗೂ ಅವರ ನಿರ್ದಿಷ್ಟ ಪುಸ್ತಕಗಳನ್ನು ಈ ಕೆಳಕಂಡ ಕಾರಣಗಳಿಗಾಗಿ ನಾನು ಆಯ್ಕೆ ಮಾಡಿಕೊಂಡಿದ್ದೇನೆ. ಮೊದಲನೆಯದಾಗಿ, ಯಿನ್, ಮೆರಿಯಮ್ ಹಾಗೂ ಸ್ಟೇಕ್, ವಿಷಯ ಅಧ್ಯಯನ ಸಂಶೋಧನೆಯನ್ನು ಕೈಗೊಳ್ಳುವಾಗ ಅನುಸರಿಸಬೇಕಾದ ಪ್ರಕ್ರಿಯೆಗಳನ್ನು ತಿಳಿಸುವ ಮೂರು ಮೌಲಿಕ ಲೇಖಕರಾಗಿದ್ದಾರೆ. (ಕ್ರೆಸ್‌ವೆಲ್, ಹ್ಯಾನ್‌ಸನ್, ಪ್ಲಾನೊ ಮತ್ತು ಮೋರೇಲ್ಸ್ 2007). ವಿಷಯ ಅಧ್ಯಯನದ ಬಳಕೆಯಲ್ಲಿ ಮಾರ್ಗನಕ್ಷೆಯೊಂದನ್ನು ರಚಿಸಿಕೊಳ್ಳಲು ಶೈಕ್ಷಣಿಕ ಸಂಶೋಧಕರಿಗೆ ಇದು ಸಹಾಯಮಾಡುತ್ತದೆ. ವಿಷಯ ಅಧ್ಯಯನ ಸಂಶೋಧನೆಯಲ್ಲಿ ಈ

ಮೂವರನ್ನು ಆಧಾರಭೂತ ವಿಧಾನಶಾಸ್ತ್ರಜ್ಞರಾಗಿ ಪರಿಗಣಿಸಲಾಗುತ್ತದೆ. ಇವರ ವಿಧಾನಾತ್ಮಕ ಸಲಹೆಗಳು ವಿಷಯ ಅಧ್ಯಯನ ವಿನ್ಯಾಸಕ್ಕೆ ಸಂಬಂಧಿಸಿದಂತೆ ಶೈಕ್ಷಣಿಕ ಸಂಶೋಧಕರ ನಿರ್ಧಾರಗಳನ್ನು ಹೆಚ್ಚಾಗಿ ಪ್ರಭಾವಿಸುತ್ತವೆ. ಎರಡನೆಯದಾಗಿ, ವಿಷಯ ಅಧ್ಯಯನವನ್ನು ಕುರಿತ ಈ ಹಿಂದಿನ ಕೃತಿಯು; ಹೆಚ್ಚಿನ ಸಂಖ್ಯೆಯ ಅನನುಭವಿ ಗುಣಾತ್ಮಕ ಸಂಶೋಧಕರಿಗೆ, ವಿನ್ಯಾಸ (ಬ್ಯಾಕ್ಸ್ಟರ್ ಮತ್ತು ಜಾಕ್, 2008), ಪರಿಚಯ (ಟೆಲ್ಲಿಸ್, 1997ಎ) ಹಾಗೂ ವಿಷಯ ಅಧ್ಯಯನ ವಿಧಾನದ ಅನ್ವಯಿಸುವಿಕೆಯ (ಟೆಲ್ಲಿಸ್, 1997ಬಿ) ವಿವರವನ್ನು ಒದಗಿಸಿದೆ. ವಿಭಿನ್ನ ಅನುಕೂಲಕರ ಅಂಶಗಳ ಹಿನ್ನೆಲೆಯಲ್ಲಿ; ಪ್ರಮುಖ ಸಂಶೋಧನಾ ವಿಧಾನಶಾಸ್ತ್ರಜ್ಞರು ನೀಡಿರುವ ವಿಭಿನ್ನ ಅಭಿಪ್ರಾಯಗಳು ಹಾಗೂ ಪರಿಕಲ್ಪನೆಗಳ ವರ್ಣಪಟಲಕ್ಕೆ ಅನನುಭವಿ ಸಂಶೋಧಕರನ್ನು ತೆರೆದಿಡುವ ಮೂಲಕ ಈ ಲೇಖನವು ಅತ್ಯಂತ ಅನುಕೂಲಕರ ಹಾಗೂ ಫಲಕಾರಿಯಗಿದೆಯೆಂಬುದು ನನ್ನ ನಂಬಿಕೆಯಾಗಿದೆ. ಈ ತೆರೆದಿಡುವಿಕೆಯು ಅವರು ಅರ್ಥಮಾಡಿಕೊಂಡಿರುವುದಕ್ಕೆ ಸಂಬಂಧಿಸಿದಂತೆ, ವಿನ್ಯಾಸವೊಂದನ್ನು ರಚಿಸಲು ಸಹಾಯ ಮಾಡುವ ಮೂಲಕ; ಅವಲಂಬಿಸಬಹುದಾದ ಹಾಗೂ ರಕ್ಷಣಾತ್ಮಕವಾದ ವಿನ್ಯಾಸದೊಡನೆ ತಮ್ಮ ಸಂಶೋಧನೆಯನ್ನು ಕೈಗೊಳ್ಳುವುದನ್ನು ಅವರಿಗೆ ಸಾಧ್ಯವಾಗಿಸುತ್ತದೆ. ಆದ್ದರಿಂದ, ಭಿನ್ನತೆ ಒಗ್ಗೂಡಿಸುವಿಕೆ ಹಾಗೂ ಪೂರಕತೆಯ ಅಂಶಗಳ ಮೂಲಕ ವಿಷಯ ಅಧ್ಯಯನ ವಿಧಾನದಲ್ಲಿನ ವಿನ್ಯಾಸದ ಕಗ್ಗಂಟಿನ ವಿಷಯಗಳನ್ನು ಕುರಿತ ಈ ಮೂರು ವಿಭಿನ್ನ ನಿಲುವುಗಳಿಗೆ ಸಂಬಂಧಿಸಿದ ಪ್ರತಿಯೊಂದು ನಿಲುವನ್ನೂ ನಾನಿಲ್ಲಿ ಮಂಡಿಸುತ್ತೇನೆ. ಕೊನೆಯದಾಗಿ, ನಾನು ಅವರ ನಿರ್ದಿಷ್ಟ ಪುಸ್ತಕಗಳನ್ನು ಈ ಲೇಖನದ ಸಾಮೀಪ್ಯದಲ್ಲಿರಿಸುವ ಕಡೆಗೆ ಗಮನಹರಿಸಿದ್ದೇನೆ. ಏಕೆಂದರೆ ಈ ಮೌಲಿಕ ಕೃತಿಗಳಲ್ಲಿ ಪರಿಪೂರ್ಣ ವಿಷಯ ಅಧ್ಯಯನ ಸಂಶೋಧನೆಗೆ ಸಂಬಂಧಿಸಿದಂತೆ, ಅದನ್ನು ಹೇಗೆ ಪರಿಕಲ್ಪನೆಗೊಳಿಸಬೇಕು (conceptualize) ಎಂಬುದರಿಂದ ಪ್ರಾರಂಭಿಸಿ, ಅದನ್ನು ಓದುಗರಿಗೆ ಹೇಗೆ ತಲುಪಿಸಬೇಕು ಎಂಬುದರವರೆಗೆ ಪ್ರತಿಯೊಂದು ಹಂತದಲ್ಲೂ ಮೌಲಿಕವಾದ ಒಳನೋಟಗಳನ್ನು ಈ ಮೂವರು ನಿಷ್ಠಾಪೂರ್ವಕವಾಗಿ ತಿಳಿಸಿಕೊಟ್ಟಿದ್ದಾರೆ. ಹೀಗಾಗಿ, ಈ ಲೇಖನದ ಓದುಗರು ವಿಷಯ ಅಧ್ಯಯನದ ಮೂರು ಸಂಪೂರ್ಣ ಮಾರ್ಗದರ್ಶಿಗಳ ಸಂಕಲನ ಹಾಗೂ ವಿಶ್ಲೇಷಣೆಯನ್ನು ಪಡೆಯಲಿದ್ದಾರೆ. ಆ ಮೂಲಕ ಅವರ ಸ್ವಂತ ಸಂಶೋಧನೆಗೆ ಅವಶ್ಯವೆನಿಸುವ ಅತ್ಯಂತ ಸೂಕ್ತ ಹಾಗೂ ಕಾರ್ಯಾತ್ಮಕ ಸಾಧನಗಳನ್ನು ಅವರು ಆಯ್ಕೆಮಾಡಿಕೊಳ್ಳಬಹುದು.

ವಿಷಯ ಅಧ್ಯಯನ ಸಂಶೋಧನೆಯಲ್ಲಿ ಈ ಮೂರು ದೃಷ್ಟಿಕೋನಗಳು ವಿಭಿನ್ನ ಆಯಾಮಗಳಲ್ಲಿ ಎಲ್ಲಿ ವಿಮುಖವಾಗಿವೆ, ಎಲ್ಲಿ ಒಮ್ಮುಖವಾಗಿವೆ ಹಾಗೂ ಎಲ್ಲಿ ಪರಸ್ಪರ ಪೂರಕವಾಗಿವೆ ಎಂಬುದನ್ನು ಪರಿಶೀಲಿಸುವುದು ಈ ಲೇಖನದಲ್ಲಿನ ನನ್ನ ಪ್ರಯತ್ನವಾಗಿದೆ. ವಿಷಯ ಅಧ್ಯಯನವನ್ನು ಕುರಿತ ಅವರ ಮೌಲಿಕ ಕೃತಿಗಳಲ್ಲಿ ಈ ಮೂರು ವಿದ್ವಾಂಸರು ಬಹುತೇಕ ಒಮ್ಮತದಿಂದಿರುವ

ಆರು ವರ್ಗೀಕೃತ ಆಯಾಮಗಳನ್ನು ನಾನು ಅನುಸರಿಸಲಿದ್ದೇನೆ: ಅವುಗಳೆಂದರೆ ಜ್ಞಾನಶಾಸ್ತ್ರೀಯ ಬದ್ಧತೆಗಳು, ವಿಷಯ ಮತ್ತು ವಿಷಯ ಅಧ್ಯಯನದ ವ್ಯಾಖ್ಯಾನ, ವಿಷಯ ಅಧ್ಯಯನದ ವಿನ್ಯಾಸ, ದತ್ತಾಂಶ ಸಂಗ್ರಹಣೆ, ದತ್ತಾಂಶ ವಿಶ್ಲೇಷಣೆ ಮತ್ತು ದತ್ತಾಂಶವನ್ನು ಊರ್ಜಿತಗೊಳಿಸುವಿಕೆ.

## ಸಂಶೋಧಕನ ಸ್ಥಾನ

ವಿಷಯ ಅಧ್ಯಯನದ ಮೂರು ದೃಷ್ಟಿಕೋನಗಳ ತುಲನೆಯನ್ನು ಪ್ರಸ್ತುತಪಡಿಸುವುದಕ್ಕಿಂತ ಮುಂಚೆ ಸಂಶೋಧಕನಾಗಿ ನನ್ನ ಗುರುತು, ಈ ವಿಷಯದಲ್ಲಿನ ನನ್ನ ತೊಡಗುವಿಕೆ ಹಾಗೂ ಈ ಯೋಜನೆಯಲ್ಲಿನ ನನ್ನ ಉದ್ದೇಶಗಳನ್ನು ಓದುಗರು ತಿಳಿದುಕೊಳ್ಳಬೇಕೆಂಬುದು ನನ್ನ ಅನಿಸಿಕೆ. ನಾನು ಈಗಷ್ಟೇ ಅನ್ವಯಿಕ ಭಾಷಾಶಾಸ್ತ್ರದ ಕ್ಷೇತ್ರದಲ್ಲಿ ನನ್ನ ಡಾಕ್ಟರಲ್ ಪದವಿಯನ್ನು ಮುಗಿಸಿದ್ದೇನೆ. ನನ್ನ ಪ್ರೌಢಪ್ರಬಂಧವು ಶಿಕ್ಷಕ ಅಭ್ಯರ್ಥಿಯ ವೃತ್ತಿಪರ ಗುರುತಿನ ಅಭಿವೃದ್ಧಿಯಲ್ಲಿ ಎರಡನೆ ಭಾಷೆಯಾಗಿ ಇಂಗ್ಲಿಷ್‌ನ್ನು ಕುರಿತಾದದ್ದು. ಮೇರಿಲ್ಯಾಂಡ್ ವಿಶ್ವವಿದ್ಯಾನಿಲಯದಲ್ಲಿ ಒಬ್ಬ ಡಾಕ್ಟರಲ್ ವಿದ್ಯಾರ್ಥಿಯಾಗಿ ಸಂಶೋಧನಾ ವಿಧಾನಕ್ಕೆ ಸಂಬಂಧಿಸಿದ ನನ್ನ ಅನ್ವೇಷಣೆಯು, ಶೈಕ್ಷಣಿಕ ಸಂಶೋಧನೆಯ ಅತ್ಯಂತ ವಿವಾದಾತ್ಮಕ ವಿಧಾನಗಳಲ್ಲಿ ಒಂದಾದ ವಿಷಯ ಅಧ್ಯಯನದಲ್ಲಿ ನಾನು ಆಸಕ್ತಿಯನ್ನು ಬೆಳೆಸಿಕೊಳ್ಳುವಂತೆ ಮಾಡಿತು. ನನ್ನ ಸಂಶೋಧನಾ ವಿಷಯವನ್ನು ಸೀಮಿತಗೊಳಿಸುವ, ನನ್ನ ಪ್ರಶ್ನೆಗಳನ್ನು ತೀಕ್ಷ್ಣಗೊಳಿಸುವ ಮತ್ತು ನನ್ನ ಪ್ರೌಢಪ್ರಬಂಧವನ್ನು ಪರಿಕಲ್ಪಿಸುವ ಹಾಗೂ ವಿನ್ಯಾಸಗೊಳಿಸುವ ಸಂದರ್ಭದಲ್ಲಿ, ಅತ್ಯಂತ ಸಾಧನಾತ್ಮಕವಾದ ಸಂಶೋಧನಾ ವಿಧಾನವನ್ನು ದೊರಕಿಸಿಕೊಳ್ಳುವ ಪ್ರಯತ್ನದ ಸಂವಾದಾತ್ಮಕ ಪ್ರಕ್ರಿಯೆಯಲ್ಲಿ ನಾನು ತೊಡಗಿಸಿಕೊಂಡಿದ್ದೆ. ಅನಂತರ, ನಾನು ವಿಷಯ ಅಧ್ಯಯನ ಕೋರ್ಸ್ಗೆ ಸೇರಿದೆ. ಇಲ್ಲಿ ಯಿನ್, ಮೆರಿಯಮ್ ಹಾಗೂ ಸ್ಟೇಕ್ ಇವರುಗಳು ವಿಷಯ ಅಧ್ಯಯನವನ್ನು ನಿರೂಪಿಸುವ ರೀತಿಯ ಪರಿಚಯವಾಯಿತು. ನನ್ನ ಪ್ರೌಢಪ್ರಬಂಧ ಸಂಶೋಧನೆಗೆ ವಿಷಯ ಅಧ್ಯಯನದ ಪ್ರಸ್ತುತತೆಯನ್ನು ತಿಳಿದುಕೊಳ್ಳುವುದಷ್ಟೇ ಅಲ್ಲದೆ, ಒಬ್ಬ ಉದಯೋನ್ಮುಖ ಸಂಶೋಧಕನಾಗಿ, ವಿಷಯ ಅಧ್ಯಯನದ ಯಾವ ಕಾರ್ಯವಿಧಾನವು ನನ್ನ ಜ್ಞಾನಶಾಸ್ತ್ರೀಯ ತಿಳುವಳಿಕೆಗೆ ಅತ್ಯಂತ ಸೂಕ್ತವಾದುದು ಎಂಬುದನ್ನು ನಿರ್ಧರಿಸಲು ಸಹಾ ನನಗೆ ಅವಕಾಶ ದೊರೆಯಿತು. ಪ್ರಸ್ತುತ ಲೇಖನವು ಈ ನಿರ್ಧಾರವನ್ನು ಕೈಗೊಳ್ಳುವ ಪ್ರಕ್ರಿಯೆಯ ಫಲಿತಾಂಶವಾಗಿದೆ.

ಈ ಲೇಖನದ ನನ್ನ ಉದ್ದೇಶ, ತಮ್ಮ ವಿಧಾನಶಾಸ್ತ್ರೀಯ ಆಯ್ಕೆಗಳಿಗೆ ಸಂಬಂಧಿಸಿದಂತೆ, ನಿರ್ಧಾರಗಳನ್ನು ಕೈಗೊಳ್ಳುವ ಪ್ರಕ್ರಿಯೆಯಲ್ಲಿರುವ ಉದಯೋನ್ಮುಖ ಸಂಶೋಧಕರಿಗೆ ವಿಷಯ ಅಧ್ಯಯನ ಸಂಶೋಧನೆಗೆ ಅಡಿಪಾಯವನ್ನು ಒದಗಿಸುವ ಮೂರು ಪಠ್ಯಪುಸ್ತಕಗಳ ತುಲನಾತ್ಮಕ ಮುನ್ನೋಟವನ್ನು ನೀಡುವುದಾಗಿದೆ. ಈ ಲೇಖನದ ಮೂಲಕ, ವಿವಿಧ ವಿಷಯ

ಅಧ್ಯಯನದ ಕಾರ್ಯವಿಧಾನಗಳನ್ನು ಅವರು ಪರಿಚಯಿಸಿಕೊಳ್ಳಬಹುದು. ಅವರ ಜ್ಞಾನಶಾಸ್ತ್ರೀಯ ಒಲವುಗಳಿಗೆ ಅನುರೂಪವಾಗಿರುವ ಹಾಗೂ ಸಂಶೋಧನಾ ಪ್ರಶ್ನೆಗಳ ಸೂಕ್ತ ನಿವೇದನೆಗೆ ಸಾಕಷ್ಟು ಸದೃಢವಾದ ಸಂಶೋಧನಾ ವಿನ್ಯಾಸವನ್ನು ರೂಪಿಸಲು ಶಕ್ಯವೆನಿಸುವ ಒಂದು ಕಾರ್ಯವಿಧಾನವನ್ನು ಅವರು ಆಯ್ಕೆಮಾಡಿಕೊಳ್ಳಬಹುದು. ಒಬ್ಬ ವಿಧಾನಶಾಸ್ತ್ರಜ್ಞನು ನೀಡಿರುವ ಸಾಧನಗಳ ಬಳಕೆಯನ್ನು ಅಥವಾ ಇಬ್ಬರು ಅಥವಾ ಮೂವರು ನೀಡಿರುವ ಸಾಧನಗಳ ಸಂಯೋಜನೆಯನ್ನು ಸಹ ಅವರು ಆಯ್ದುಕೊಳ್ಳಬಹುದು.

## ತುಲನಾತ್ಮಕ ವಿಶ್ಲೇಷಣೆಯ ಸವಾಲುಗಳು

ವಿಷಯ ಅಧ್ಯಯನದ ಮೂರು ದೃಷ್ಟಿಕೋನಗಳ ತುಲನೆಯನ್ನು ಪ್ರಸ್ತುತಪಡಿಸುವುದಕ್ಕಿಂತ ಮುಂಚೆ ಈ ತುಲನಾತ್ಮಕ ಸಂಯೋಜನೆಯು ಒಳಗೊಂಡಿರುವ ಪ್ರಮುಖ ಸವಾಲುಗಳನ್ನು ನಾನು ತಿಳಿಸಬೇಕು. ಈ ಲೇಖನದಲ್ಲಿ ನಾನು ವಿಶ್ಲೇಷಿಸಲು ಪ್ರಯತ್ನಿಸಿರುವ ಮೌಲಿಕ ಪುಸ್ತಕಗಳ ಮೂರು ಲೇಖಕರು ಈ ಪುಸ್ತಕಗಳನ್ನು ಬರೆಯಲು ವಿಭಿನ್ನ ಉದ್ದೇಶಗಳನ್ನು ಹೊಂದಿರುವಂತೆ ಕಂಡುಬರುತ್ತದೆ. ಈ ವ್ಯತ್ಯಾಸದಿಂದಾಗಿ; ವಿಷಯ ಅಧ್ಯಯನದ ಎಲ್ಲಾ ದೃಷ್ಟಿಕೋನಗಳ ನಿಟ್ಟಿನಲ್ಲಿ, ಈ ಮೂರು ವಿಷಯ ಅಧ್ಯಯನ ದೃಷ್ಟಿಕೋನಗಳನ್ನು ಒಂದೇ ಆಧಾರದಲ್ಲಿ ಹೋಲಿಕೆ ಮಾಡುವಲ್ಲಿ ನಾನು ಭಾಗಶಃ ಮಿತಿಯನ್ನು ಎದುರಿಸಬೇಕಾಗುತ್ತದೆ. ಉದಾಹರಣೆಗೆ, ಸ್ಟೇಕ್‌ನ (1995) 'ದಿ ಆರ್ಟ್ ಆಫ್ ಕೇಸ್ ಸ್ಟಡಿ ರೀಸರ್ಚ್'ನ್ನು ಸಂಶೋಧನಾ ಯೋಜನೆಗಳಲ್ಲಿ ವಿಷಯ ಅಧ್ಯಯನವನ್ನು ಒಂದು ವಿಧಾನವಾಗಿ ಅಳವಡಿಸಿಕೊಳ್ಳಲು ಆಲೋಚಿಸುತ್ತಿರುವ ವಿದ್ಯಾರ್ಥಿಗಳನ್ನು ಗುರಿಯಾಗಿರಿಸಿಕೊಂಡು ರಚಿಸಲಾಗಿದೆ. ಆತನ ಪುಸ್ತಕದ ಪ್ರಮುಖ ಉದ್ದೇಶ, ವಿಷಯ ಅಧ್ಯಯನದ ಕುರಿತಾದ ವ್ಯಾಖ್ಯಾನದ ದೃಷ್ಟಿಕೋನಗಳ ಗುಂಪನ್ನು ವಿವರಿಸುವುದಾಗಿದೆ. ಇದು "ಸ್ವಾಭಾವಿಕ, ಸಮಗ್ರ, ಜನಾಂಗೀಯ, ವಿದ್ಯಮಾನಶಾಸ್ತ್ರೀಯ ಮತ್ತು ಜೀವನ ಚರಿತ್ರೆಯ ಸಂಶೋಧನಾ ವಿಧಾನಗಳನ್ನು" ಒಳಗೊಂಡಿದೆ (ಸ್ಟೇಕ್, 1995, ಪು. xi) ಯಿನ್‌ನ ಉದ್ದೇಶ, ವಿಷಯ ಅಧ್ಯಯನದ ವಿನ್ಯಾಸ ಮತ್ತು ವಿಧಾನಗಳನ್ನು ಪ್ರಸ್ತುತಪಡಿಸುವುದಾಗಿದೆ. ಸೈದ್ಧಾಂತಿಕ ಪ್ರತಿಪಾದನೆಗೆ ಸಂಬಂಧಿಸಿದ ಶೋಧನೆಗಳನ್ನು ಕೈಗೊಳ್ಳಲು ಸಮಾಜ ವಿಜ್ಞಾನಗಳಲ್ಲಿ ವಿಷಯ ಅಧ್ಯಯನವು ಒಂದು ವಿಧಿವತ್ತಾದ ವಿಧಾನವೆಂಬುದನ್ನು ಆತನು ಪ್ರತಿಪಾದಿಸುತ್ತಾನೆ. ಆತನ ಪ್ರಕಾರ ಈ ಹಿಂದಿನ ಎಲ್ಲಾ ಪ್ರಯತ್ನಗಳಲ್ಲೂ ವಿಷಯ ಅಧ್ಯಯನ ವಿಧಾನದ ಉಪಯೋಗವನ್ನು ಕುರಿತ ಸಮಗ್ರ ಮಾರ್ಗದರ್ಶನದ ಕೊರತೆಯಿರುವಂತೆ ಕಂಡುಬರುತ್ತವೆ. ಹೀಗಾಗಿ, ಆತನು ತನ್ನ ಕೃತಿಯು, "ಪಠ್ಯಗಳಿಂದ ನಿಯಂತ್ರಿಸಲ್ಪಟ್ಟಿರುವ ಸಮಾಜ ವಿಜ್ಞಾನ ಸಂಶೋಧನೆಯಲ್ಲಿ ಕಂಡುಬರುವ ಕೊರತೆಯನ್ನು ತುಂಬಬೇಕು..., ವಿಷಯ ಅಧ್ಯಯನವನ್ನು ಹೇಗೆ

ಪ್ರಾರಂಭಿಸಬೇಕು, ದತ್ತಾಂಶವನ್ನು ಹೇಗೆ ವಿಶ್ಲೇಷಿಸಬೇಕು ಅಥವಾ ವಿಷಯ ಅಧ್ಯಯನ ವರದಿಯನ್ನು ಸಿದ್ಧಪಡಿಸುವಲ್ಲಿನ ಸಮಸ್ಯೆಗಳನ್ನು ಹೇಗೆ ಕಡಿಮೆ ಮಾಡಿಕೊಳ್ಳಬೇಕು ಎಂಬುದಕ್ಕೆ ಕೆಲವು ಮಾರ್ಗದರ್ಶನಗಳನ್ನು ನೀಡಬೇಕೆಂದು ಬಯಸುತ್ತಾನೆ (ಯಿನ್, 2002, ಪು. 3). ವಿಷಯ ಅಧ್ಯಯನದ ಸಂಶೋಧಕರಿಗೆ ಲಭ್ಯವಿರುವ ಸಂಪನ್ಮೂಲಗಳಲ್ಲಿನ ಕೊರತೆಯನ್ನು ಮೆರಿಯಮ್ ಗಮನಿಸುತ್ತಾಳೆ. ಯಿನ್‌ನಂತೆಯೆ ಮೆರಿಯಮ್ ಸಹಾ, “ಇತರೆ ವಿಧಾನಗಳಿಗೆ ಹೋಲಿಸಿದರೆ ಇನ್ನೂ ಹಿಂದುಳಿದಿರುವ” ವಿಷಯ ಅಧ್ಯಯನದ ಸಾಹಿತ್ಯಕ್ಕೆ ಕೊಡುಗೆ ನೀಡುವ ಉದ್ದೇಶವನ್ನು ಹೊಂದಿದ್ದಾಳೆ (ಮೆರಿಯಮ್, 1998, ಪು. 19). ಮೆರಿಯಮ್‌ನ ಪಠ್ಯವು, ಮುಖ್ಯವಾಗಿ ಗುಣಾತ್ಮಕ ಸಂಶೋಧನೆಯ ಸಾಮಾನ್ಯ ತತ್ವಗಳು ಹಾಗೂ ಉಪಯೋಗಗಳ ಮೇಲೆ ಗಮನವನ್ನು ಕೇಂದ್ರೀಕರಿಸುತ್ತದೆ. ಗುಣಾತ್ಮಕ ಸಂಶೋಧನಾ ವಿಧಾನಗಳಲ್ಲಿ ಒಂದಾದ ವಿಷಯ ಅಧ್ಯಯನದ ವಿಧಾನಕ್ಕೆ ಇವುಗಳನ್ನು ಹೇಗೆ ಅನ್ವಯಿಸಲಾಗುತ್ತದೆಂಬುದಕ್ಕೆ ಈ ಪುಸ್ತಕವು ಎರಡನೆಯ ಪ್ರಾಶಸ್ತ್ಯವನ್ನು ನೀಡುತ್ತದೆ. ವಿಷಯ ಅಧ್ಯಯನದಲ್ಲಿ ಪ್ರಸ್ತುತ ಕಂಡುಬರುವ ‘ಅಸ್ಪಷ್ಟ’ ವಿಷಯಗಳನ್ನು ವಿವರಿಸುವುದು ಆಕೆಯ ಉದ್ದೇಶವಾಗಿದೆ. ಗುಣಾತ್ಮಕ ಸಂಶೋಧನೆಯಲ್ಲಿ ವಿಷಯ ಅಧ್ಯಯನವನ್ನು ಕುರಿತಾದ ಗೊಂದಲವನ್ನು ನಿವಾರಿಸುವುದು ಆಕೆಯ ಪುಸ್ತಕದ ಉದ್ದೇಶವಾಗಿದೆ. ಇದಲ್ಲದೆ, “ವಿಷಯ ಅಧ್ಯಯನವು ಯಾವುದನ್ನು ಒಳಗೊಂಡಿದೆ, ಇತರೆ ಗುಣಾತ್ಮಕ ಸಂಶೋಧನಾ ವಿಧಾನಗಳಿಗಿಂತ ಇದು ಹೇಗೆ ವಿಭಿನ್ನವಾಗಿದೆ ಹಾಗೂ ಇದರ ಉಪಯೋಗ ಯಾವಾಗ ಅತ್ಯಂತ ಸೂಕ್ತವೆನಿಸುತ್ತದೆ” ಎಂಬುದರ ಕಡೆಗೆ ಬೆಳಕು ಚೆಲ್ಲುವುದೂ ಸಹಾ ಈ ಪುಸ್ತಕದ ಉದ್ದೇಶವಾಗಿದೆ (ಮೆರಿಯಮ್, 1998, ಪು. 19). ಈ ವಿಶ್ಲೇಷಣೆಯ ಉಳಿದ ಭಾಗದಲ್ಲಿ ಲೇಖಕರು ವಿಭಿನ್ನ ಅಂಶಗಳಿಗೆ ನೀಡುವ ಮಹತ್ವಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಈ ವ್ಯತ್ಯಾಸಗಳು ವಿವರಣೆ ನೀಡಬಹುದು. ಮುಂದಿನ ವಿಭಾಗವು, ನಾನು ವಿಶ್ಲೇಷಣೆಯನ್ನು ಕೈಗೊಳ್ಳುವುದಕ್ಕಿಂತ ಮುಂಚೆ ಪರಿಗಣಿಸಬೇಕಾದ ವ್ಯತ್ಯಾಸವೊಂದರ ಕಡೆಗೆ ಬೆಳಕು ಚೆಲ್ಲಲಿದೆ.

ಈ ವಿಶ್ಲೇಷಣೆಯಲ್ಲಿ ನಾನು ಅನುಸರಿಸಿದ ವಿಧಾನವನ್ನು ವಿವರಿಸುವುದಾದರೆ, ಈ ಮೂರು ಪುಸ್ತಕಗಳ ನನ್ನ ಪ್ರಾರಂಭಿಕ ಪರಿಶೀಲನೆಯು ನಾನು ತುಲನಾತ್ಮಕ ಹಾಗೂ ವ್ಯತಿರಿಕ್ತಾತ್ಮಕ ವಿಶ್ಲೇಷಣೆಯನ್ನು ಕೈಗೊಳ್ಳುವಾಗ ಗಮನಹರಿಸಬೇಕಾದ ಮಾನದಂಡಗಳನ್ನು ಆಯ್ಕೆಮಾಡಿಕೊಳ್ಳಲು ನೆರವಾಯಿತು. ಈ ಮಾನದಂಡಗಳು ಇಂತಿವೆ: ಜ್ಞಾನಶಾಸ್ತ್ರೀಯ ಬದ್ಧತೆಗಳು, ವಿಷಯ ಮತ್ತು ವಿಷಯ ಅಧ್ಯಯನದ ವ್ಯಾಖ್ಯಾನ, ವಿಷಯ ಅಧ್ಯಯನದ ವಿನ್ಯಾಸ, ದತ್ತಾಂಶ ಸಂಗ್ರಹಣೆ, ದತ್ತಾಂಶ ವಿಶ್ಲೇಷಣೆ ಹಾಗೂ ದತ್ತಾಂಶವನ್ನು ಊರ್ಜಿತಗೊಳಿಸುವುದು. ನನ್ನ ಎರಡನೆಯ ಹಂತವು; ತಃಖ್ತೆಯೊಂದನ್ನು (Chart) ಸಿದ್ಧಪಡಿಸಿ, ಈ ಮೂರು ವಿಷಯ ಅಧ್ಯಯನ ಕಾರ್ಯವಿಧಾನಗಳಲ್ಲಿ ನಾನು ಗಮನಿಸಿದ ಸಾಮ್ಯತೆಗಳು ಮತ್ತು ವ್ಯತ್ಯಾಸಗಳನ್ನು ಅದರಲ್ಲಿ ದಾಖಲಿಸುವುದಾಗಿತ್ತು. ಪ್ರತಿಯೊಂದು ಪಠ್ಯದ ಸಂಬಂಧಿತ ವಿಭಾಗಗಳನ್ನು

ಅಧ್ಯಯನ ಮಾಡಿ, ಪ್ರತಿಯೊಂದು ಮಾನದಂಡಕ್ಕೆ ಸಂಬಂಧಿಸಿದಂತೆ ಅವು ಹೇಗೆ ವಿಮುಖವಾಗಿವೆ ಹಾಗೂ ಒಮ್ಮುಖವಾಗಿವೆಯೆಂಬುದನ್ನು ಅರ್ಥೈಸಿಕೊಂಡು ಈ ಚಾರ್ಟನ್ನು ನಾನು ಸಿದ್ಧಪಡಿಸಿದ್ದೇನೆ. ಈ ಚಾರ್ಟನ್ನು ಪೂರ್ಣಗೊಳಿಸಿದ ನಂತರ ನಾನು ವಿಮರ್ಶಾ ಸ್ನೇಹಿತರೆಂದು ಕರೆಯುವ ಹೆಚ್ಚು ಅನುಭವಿ ಗುಣಾತ್ಮಕ ಸಂಶೋಧಕರ ಜೊತೆಗೂಡಿ ನನ್ನ ವಿಶ್ಲೇಷಣೆಯ ಸಿಂಧುತ್ವವನ್ನು ಪರೀಕ್ಷಿಸಲು ಬಯಸಿದ್ದೆ. ಮೂರು ಪ್ರೌಢ ಡಾಕ್ಟರಲ್ ವಿದ್ಯಾರ್ಥಿಗಳು ಮತ್ತು ನಾನು ಆಯ್ದುಕೊಂಡ ವಿಷಯ ಅಧ್ಯಯನದ ವಿಚಾರ ಸಂಕಿರಣದ ಒಬ್ಬ ಪ್ರಾಧ್ಯಾಪಕರ ಜೊತೆ ಪ್ರತ್ಯೇಕ ಸಭೆಗಳನ್ನು ನಾನು ನಡೆಸಿದೆ. ಅವರೊಂದಿಗಿನ ನನ್ನ ಮಾತುಕತೆಗಳು ಈ ಲೇಖನವನ್ನು ರೂಪಿಸಿದ ಚಾರ್ಟ್‌ನ ಅಂತಿಮ ರೂಪವನ್ನು ನೀಡಿದವು.

## ಜ್ಞಾನಶಾಸ್ತ್ರೀಯ ಬದ್ಧತೆಗಳು

ಜ್ಞಾನದ ಸ್ವರೂಪ ಮತ್ತು ಸೃಜನೆಯ ಬಗೆಗಿನ ಸಂಶೋಧಕರ ಅಭಿಪ್ರಾಯಗಳು, ಸಂಕ್ಷಿಪ್ತವಾಗಿ ಅವರ ಜ್ಞಾನಶಾಸ್ತ್ರೀಯ ಒಲವು, ಅವರು ಪರಿಕಲ್ಪಿಸಿಕೊಳ್ಳುವ ಹಾಗೂ ಕಾರ್ಯಾಚರಿಸುವ ಸಂಶೋಧನಾ ಯೋಜನೆಗೆ ಆಧಾರಿತವಾಗಿದೆ. ಇದು ಇಡೀ ವಿಚಾರಣಾ ಪ್ರಕ್ರಿಯೆಯ ಪ್ರತಿಯೊಂದು ಹಂತವನ್ನು ವ್ಯಾಪಿಸಿದ್ದು, ಪರಿಶೀಲನೆಗೆ ಒಳಪಡಿಸಿರುವ ಆಸಕ್ತಿಯ ವಿದ್ಯಮಾನಗಳ ಆಯ್ಕೆಯಿಂದ, ಅಂತಿಮ ವರದಿಯ ಸಂಯೋಜನೆಯವರೆಗೆ ಹರಡಿಕೊಂಡಿದೆ. ಮೆರಿಯಮ್ ತಿಳಿಸಿರುವಂತೆ, "ಸಂಶೋಧನೆಯು ವಿಶ್ವದ ಕುರಿತಾದ ಜ್ಞಾನದ ಸೃಜನೆ. ನಮ್ಮ ವಿಷಯದಲ್ಲಿ, ಶೈಕ್ಷಣಿಕ ಆಚರಣೆಯ ವಿಶ್ವದ ಕುರಿತಾಗಿದೆ" (ಮೆರಿಯಮ್, 1998, ಪು. 3). ಸಂಶೋಧಕರು ಮತ್ತು ಸಂಶೋಧನಾ ವಿಧಾನಶಾಸ್ತ್ರಜ್ಞರಾಗಿ; ಯಿನ್, ಮೆರಿಯಮ್ ಮತ್ತು ಸ್ಟೇಕ್ ಅವರದೇ ಆದ ಜ್ಞಾನಾತ್ಮಕ ಬದ್ಧತೆಗಳನ್ನು ಹೊಂದಿದ್ದಾರೆ. ಇವು ವಿಷಯ ಅಧ್ಯಯನ ವಿಧಾನವನ್ನು ಕುರಿತ ಅವರ ದೃಷ್ಟಿಕೋನಗಳನ್ನು ಹಾಗೂ ಉದಯೋನ್ಮುಖ ಸಂಶೋಧಕರು ಅವರ ಸಂಶೋಧನಾ ಪ್ರಯತ್ನಗಳಲ್ಲಿ ವಿಷಯ ಅಧ್ಯಯನ ವಿಧಾನವನ್ನು ಬಳಸಿಕೊಳ್ಳುವಾಗ ಅನುಸರಿಸಬೇಕೆಂದು ಶಿಫಾರಸ್ಸು ಮಾಡಲಾದ ತತ್ವಗಳು ಮತ್ತು ಹಂತಗಳನ್ನು ಪ್ರಭಾವಿಸುತ್ತವೆ. ಈ ಬದ್ಧತೆಗಳು ಅವರ ವಿಷಯ ಅಧ್ಯಯನ ಸಂಶೋಧನೆಯ ಮೌಲಿಕ ಕೃತಿಯಾದ್ಯಂತ ವ್ಯಕ್ತ ಅಥವಾ ಅವ್ಯಕ್ತರೂಪದಲ್ಲಿ ಸ್ವಯಂ ಪ್ರಕಟಗೊಳ್ಳುತ್ತವೆ. ಅಲ್ಲದೆ ವಿಷಯ ಅಧ್ಯಯನವನ್ನು ರೂಪಿಸುವ ಅನುಕೂಲಕರ ಅಂಶಗಳನ್ನು ಇವು ನಿರ್ಧರಿಸುತ್ತವೆ. ಹೀಗಾಗಿ, ನನ್ನ ವಿಶ್ಲೇಷಣೆಗೂ ಮುಂಚೆ, ಯಿನ್, ಮೆರಿಯಮ್ ಮತ್ತು ಸ್ಟೇಕ್‌ರವರ ನಿರ್ದಿಷ್ಟ ಜ್ಞಾನಶಾಸ್ತ್ರೀಯ ಒಲವಿನ ಲಾಭವನ್ನು ನಾನು ಪಡೆದುಕೊಳ್ಳುತ್ತೇನೆ. ಇದು ನನ್ನ ನಂತರದ ವಿಶ್ಲೇಷಣೆಯನ್ನು ತಿಳಿಯಪಡಿಸುತ್ತದೆ.

ವಿಷಯ ಅಧ್ಯಯನಕ್ಕೆ ಸಂಬಂಧಿಸಿದ ತನ್ನ ದೃಷ್ಟಿಕೋನದಲ್ಲಿ ಯಿನ್, ವಾಸ್ತವಿಕತೆಯನ್ನು ಅವಲಂಬಿಸುತ್ತಾನೆ. ಕ್ರಾಟಿ (1998), ಸಂಶೋಧನೆಯ ವಾಸ್ತವಿಕ ಒಲವಿನಲ್ಲಿ; ವಸ್ತುನಿಷ್ಠತೆ, ಸಿಂಧುತ್ವ ಹಾಗೂ ಸಾಮಾನ್ಯೀಕರಣಗೊಳಿಸುವಿಕೆ ಎಂಬ ಮೂರು ಕಲ್ಪನೆಗಳು ಮೂಲಭೂತವಾದವುಗಳೆಂದು ಸೂಚಿಸುತ್ತಾನೆ. ತಮ್ಮ ಪ್ರಸ್ತಾಪಿತ ಅಧ್ಯಯನವು; "ಸ್ಥಾಪಿತ ಸತ್ಯಗಳನ್ನು ಅಥವಾ ತಮ್ಮ ಸಂಶೋಧನೆಗಳು ಸಾಧ್ಯವಾಗಿಸಿದ ಸ್ಥಾಪಿತ ಸತ್ಯಗಳಿಗೆ ಸಮೀಪವೆನಿಸುವ ಫಲಿತಾಂಶವನ್ನು ಒದಗಿಸುತ್ತದೆಯೆಂದು ಸಂಶೋಧಕರು ನಿಶ್ಚಯಪೂರ್ವಕವಾಗಿ ತಿಳಿಸಿದಲ್ಲಿ, ಕ್ರಾಟಿಯ (1998) ದೃಷ್ಟಿಕೋನದಲ್ಲಿ ಇದರರ್ಥವೇನೆಂದರೆ, ಅವರ ಸಂಶೋಧನೆಯನ್ನು ಸದೃಢಗೊಳಿಸುವ ತಾತ್ವಿಕ ಸಂಪ್ರದಾಯವು ವಾಸ್ತವಿಕವಾದುದಾಗಿದೆ (ಪು. 41). ಯಿನ್ ತನ್ನ ಪುಸ್ತಕದಲ್ಲಿ ಜ್ಞಾನಶಾಸ್ತ್ರೀಯ ಒಲವನ್ನು ಸ್ಪಷ್ಟ ಮಾತುಗಳಲ್ಲಿ ವ್ಯಕ್ತಪಡಿಸುವುದಿಲ್ಲ. ಆದರೆ ವಿಷಯ ಅಧ್ಯಯನ ಅಥವಾ ಸಾಮಾನ್ಯವಾಗಿ ಸಂಶೋಧನೆಯನ್ನು ಆತನು ಕೈಗೊಳ್ಳುವ ರೀತಿ ಹಾಗೂ ಆತನು ಒತ್ತು ನೀಡುವ ಅಂಶಗಳು ಆತನ ತಾತ್ವಿಕ ನಿಲುವು, ವಾಸ್ತವಿಕ ಸಂಪ್ರದಾಯದ ಕಡೆಗಿದೆಯೆಂಬುದನ್ನು ಸೂಚಿಸುತ್ತದೆ. ಉದಾಹರಣೆಗೆ, ಯಿನ್‌ನ ದೃಷ್ಟಿಕೋನದಿಂದ ವಿಷಯ ಅಧ್ಯಯನ ಸಂಶೋಧಕನು "ವಿನ್ಯಾಸದ ಗುಣಮಟ್ಟಕ್ಕೆ ಸಂಬಂಧಿಸಿದಂತೆ; ರಚನಾ ಸಿಂಧುತ್ವ, ಆಂತರಿಕ ಸಿಂಧುತ್ವ, ಬಾಹ್ಯ ಸಿಂಧುತ್ವ ಹಾಗೂ ವಿಶ್ವಾಸಾರ್ಹತೆ ಎಂಬ ನಾಲ್ಕು ಪರಿಸ್ಥಿತಿಗಳನ್ನು ಗರಿಷ್ಠಗೊಳಿಸಬೇಕು. ಅನ್ವೇಷಕರು ಗುಣಮಟ್ಟ ನಿಯಂತ್ರಣದ ಈ ಅಂಶಗಳನ್ನು ಹೇಗೆ ನಿಭಾಯಿಸುತ್ತಾರೆ" (ಯಿನ್, 2002, ಪು. 19) ಎಂಬುದು ವಿಷಯ ಅಧ್ಯಯನ ಸಂಶೋಧನೆಯ ಪ್ರತಿಯೊಂದು ಹಂತದಲ್ಲಿಯೂ ಅತ್ಯಂತ ಮಹತ್ವದ್ದಾಗಿದೆ. ಉದಯೋನ್ಮುಖ ಸಂಶೋಧಕರು ತಮ್ಮ ಸಂಶೋಧನೆಯಲ್ಲಿ ಗುಣಮಟ್ಟವನ್ನು ಖಾತರಿಪಡಿಸಿಕೊಳ್ಳಲು ಅವರ ಅನ್ವೇಷಣೆಯ ಪ್ರತಿಯೊಂದು ಹಂತದಲ್ಲಿಯೂ ಈ ನಾಲ್ಕು 'ಮಾನದಂಡ'ಗಳನ್ನು ನೆನಪಿಟ್ಟುಕೊಳ್ಳಬೇಕೆಂಬುದು ಯಿನ್ ಬರಹದಲ್ಲಿನ ನಿರಂತರ ಸಲಹೆಯಾಗಿದೆ. ಹೀಗೆ, ಕ್ರ್ಯಾಟಿಯು ಅರ್ಥಮಾಡಿಕೊಂಡಿರುವಂತೆ, ವಾಸ್ತವಿಕವಾದ ಒಲವು ವಿಷಯ ಅಧ್ಯಯನ ಸಂಶೋಧನೆಯನ್ನು ಕುರಿತ ಯಿನ್‌ನ ದೃಷ್ಟಿಕೋನಕ್ಕೆ ಆಧಾರವಾಗಿದೆ. ಇದಲ್ಲದೆ, ಪರಿಮಾಣಾತ್ಮಕ ಮತ್ತು ಗುಣಾತ್ಮಕ ಸಂಶೋಧನಾ ಸಂಪ್ರದಾಯಗಳ ನಡುವಿನ ವಿಭಜನೆಯ ಮೇಲಿನ ಯಿನ್‌ನ ದೃಷ್ಟಿಕೋನವು, ಯಿನ್ ತನ್ನ ತಾತ್ವಿಕ ಒಲವನ್ನು ಏಕೆ ಬಹಿರಂಗವಾಗಿ ಚರ್ಚಿಸುವುದಿಲ್ಲವೆಂಬುದಕ್ಕೆ ಸೂಚನೆಯಾಗಿರಬಹುದು. ಸರಿಪಡಿಸಲಾಗದ ತಾತ್ವಿಕ ವ್ಯತ್ಯಾಸಗಳ ಕಾರಣದಿಂದಾಗಿ ಗುಣಾತ್ಮಕ ಮತ್ತು ಪರಿಮಾಣಾತ್ಮಕ ಒಲುವುಗಳ ನಡುವೆ ವ್ಯತ್ಯಾಸಗಳನ್ನು ಗುರುತಿಸುವವರ ವಿರುದ್ಧ ಯಿನ್ ವಾದಿಸುತ್ತಾನೆ: "ಗುಣಾತ್ಮಕ ಅಥವಾ ಪರಿಮಾಣಾತ್ಮಕ ಸಂಶೋಧನೆಯತ್ತ ಯಾರೇ ಒಲವು ತೋರಲಿ, ಇವೆರಡರ ನಡುವೆ ದೃಢವಾದ ಹಾಗೂ ಅತ್ಯವಶ್ಯಕವಾದ ಸಾಮಾನ್ಯ ತಳಹದಿಯಿದೆ" (ಯಿನ್, 2002, ಪು. 15). ಈ ಎರಡು ಸಂಶೋಧನಾ ಸಂಪ್ರದಾಯಗಳ ಸಾಮಾನ್ಯ ಅಂಶಗಳತ್ತ ಆತನು

ಗಮನಹರಿಸುತ್ತಾನಲ್ಲದೆ ಆತನು ಸೂಚಿಸುವ ವಿಷಯ ಅಧ್ಯಯನದ ವಿನ್ಯಾಸ ಮತ್ತು ವಿಧಾನಗಳಲ್ಲಿ ಕಾರ್ಯಾಚರಿಸುವ ಹಾಗೂ ಕಾರಣವಾಗುವ ಸಾಮಾನ್ಯ ಸಾಧನಗಳನ್ನು ಪ್ರಾಯೋಗಿಕವಾಗಿ ಮುನ್ನೆಲೆಗೆ ತರುತ್ತಾನೆ. ಹೀಗಾಗಿ ಆತನು ಪರಿಮಾಣಾತ್ಮಕ ಹಾಗೂ ಗುಣಾತ್ಮಕ ವಿಷಯ ಅಧ್ಯಯನ ವಿಧಾನಗಳ ನಡುವೆ ವ್ಯತ್ಯಾಸವನ್ನು ಕಾಣುವುದಿಲ್ಲ.

ಯಿನ್ ತನ್ನ ಜ್ಞಾನಾತ್ಮಕ ಬದ್ದತೆಗಳು ಅಥವಾ ವಿಷಯ ಅಧ್ಯಯನ ವಿಧಾನವನ್ನು ಮುನ್ನಡೆಸತಕ್ಕ ಆದ್ಯತೆಯ ಜ್ಞಾನಶಾಸ್ತ್ರದ ಬಗ್ಗೆ ಹೇಳಿಕೆಗಳನ್ನು ನೀಡುವುದರಿಂದ ತಪ್ಪಿಸಿಕೊಂಡಂತೆ ಕಂಡುಬರುತ್ತದೆ. ಆದರೆ ಸ್ಟೇಕ್, ಯಿನ್‌ನಂತಲ್ಲದೆ; ಜ್ಞಾನಶಾಸ್ತ್ರೀಯ ಸಂಪ್ರದಾಯವನ್ನು ವಿವರಿಸಲು ಆತನ ಪುಸ್ತಕದ ಅಧ್ಯಾಯವೊಂದರ ದೊಡ್ಡದೊಂದು ಭಾಗವನ್ನೇ ಮೀಸಲಿಟ್ಟಿದ್ದಾನೆ. ಈ ಸಂಪ್ರದಾಯಕ್ಕೆ ಗುಣಾತ್ಮಕ ವಿಷಯ ಅಧ್ಯಯನ ಸಂಶೋಧಕರು ಆತುಕೊಳ್ಳಬೇಕೆಂಬುದು ಸ್ಟೇಕ್‌ನ ಸಲಹೆ. "ವಿಷಯ ಅಧ್ಯಯನ ಸಂಶೋಧಕರು ಓದುಗನ ಅನುಭವಕ್ಕೆ ಹೇಗೆ ಕೊಡುಗೆ ನೀಡಬೇಕೆಂಬುದು ಅವರ (ಸಂಶೋಧಕರ) ಜ್ಞಾನ ಮತ್ತು ವಾಸ್ತವಿಕತೆಯ ಕಲ್ಪನೆಗಳನ್ನು ಆಧರಿಸಿದೆ ಎಂಬುದು ಆತನ ಅಭಿಪ್ರಾಯವಾಗಿದೆ (ಸ್ಟೇಕ್, 1995, ಪು. 100). ಸ್ಟೇಕಿಯನ್ ದೃಷ್ಟಿಕೋನದಲ್ಲಿ, ರಚನಾವಾದ ಹಾಗೂ ಅಸ್ತಿತ್ವವಾದಗಳು (ಅನಿರ್ಣಾಯಕತೆ) ಗುಣಾತ್ಮಕ ವಿಷಯ ಅಧ್ಯಯನ ಸಂಶೋಧನೆಯನ್ನು ಅಭಿವಿನ್ಯಾಸಗೊಳಿಸುವ ಹಾಗೂ ಮಾಹಿತಿ ನೀಡುವ ಜ್ಞಾನಶಾಸ್ತ್ರಗಳಾಗಬೇಕು. ಏಕೆಂದರೆ, "ಬಹುತೇಕ ಸಮಕಾಲೀನ ಗುಣಾತ್ಮಕ ಸಂಶೋಧಕರು, ಜ್ಞಾನವನ್ನು ರಚಿಸಬಹುದೇ ಹೊರತು ಅನ್ವೇಷಿಸಲಾಗುವುದಿಲ್ಲವೆಂದು ನಂಬುತ್ತಾರೆ" (ಸ್ಟೇಕ್, 1995, ಪು. 99). ಹೀಗಾಗಿ ಗುಣಾತ್ಮಕ ವಿಷಯ ಅಧ್ಯಯನ ಸಂಶೋಧಕರನ್ನು; ವ್ಯಾಖ್ಯಾನಕಾರರಾಗಿ ಹಾಗೂ ಅವರ ಸಂಶೋಧನೆಯ ಮೂಲಕ ಸಂಗ್ರಹಿಸುವ ಸೃಜಿತ ವಾಸ್ತವಿಕತೆ ಅಥವಾ ಜ್ಞಾನವನ್ನು ನಿರೂಪಿಸಲು ಅಥವಾ ಸೃಜನೆಯನ್ನು ವರದಿಮಾಡಲು ಅಗತ್ಯವಿರುವ ವ್ಯಾಖ್ಯಾನಗಳನ್ನು ಸಂಗ್ರಹಿಸುವವರಾಗಿ ಸ್ಟೇಕ್ ಭಾವಿಸುತ್ತಾನೆ. ಸ್ಟೇಕ್‌ನ ದೃಷ್ಟಿಕೋನದಲ್ಲಿ ಮೇಲೆ ತಿಳಿಸಿದ ಎರಡು ಹಂತಗಳ ಜೊತೆಗೆ ಮತ್ತೊಂದು ಹಂತದ ವಾಸ್ತವಿಕತೆ ಅಥವಾ ಜ್ಞಾನ ಸೃಜನೆಯು ಅವರ ವರದಿಯ ಓದುಗರೆಡೆಯಿಂದ ಉದ್ಭವಾಗುವುದನ್ನು ಗುಣಾತ್ಮಕ ಸಂಶೋಧಕರು ನಿರೀಕ್ಷಿಸತಕ್ಕದ್ದು. ಈ ನಿರ್ಧಾರವು; "ಪ್ರತಿನಿಧಿಸಬೇಕಾದ ವಿಷಯದ ಅನೇಕ ದೃಷ್ಟಿಕೋನಗಳು ಹಾಗೂ ಅಭಿಪ್ರಾಯಗಳಿವೆಯಾದರೂ, ಅತ್ಯುತ್ತಮ ಅಭಿಪ್ರಾಯವನ್ನು ವಿವಾದಾತೀತವಾಗಿ ನೆಲೆಗೊಳಿಸಲಾಗುವುದಿಲ್ಲ" ಎಂಬ ಸ್ಟೇಕ್‌ನ ಪ್ರತಿವಿರೋಧಕ್ಕೆ ಯುಕ್ತವಾಗಿದೆ (ಸ್ಟೇಕ್, 1995, ಪು. 108).

ಮೆರಿಯಮ್, ತನ್ನ ಜ್ಞಾನಶಾಸ್ತ್ರೀÃಯ ನಿಲುವಿನಲ್ಲಿ; ಯಿನ್‌ನ ದೃಷ್ಟಿಕೋನಕ್ಕಿಂತ ಸ್ಟೇಕ್‌ನ ದೃಷ್ಟಿಕೋನಕ್ಕೆ ಹತ್ತಿರವಿದ್ದಾಳೆ. ಆಕೆಯ ದೃಷ್ಟಿಕೋನದಲ್ಲಿ ಗುಣಾತ್ಮಕ ವಿಷಯ ಅಧ್ಯಯನವನ್ನು

ಅಭಿವಿನ್ಯಾಸಗೊಳಿಸುವ ಜ್ಞಾನಶಾಸ್ತ್ರವು ರಚನಾವಾದವಾಗಿದೆ. “ವ್ಯಕ್ತಿಗಳು ಅವರ ಸಾಮಾಜಿಕ ಪ್ರಪಂಚಗಳೊಡನೆ ಪರಸ್ಪರ ಕಾರ್ಯಾಚರಿಸುವ ಮೂಲಕ ವಾಸ್ತವಿಕತೆಯನ್ನು ಸೃಷ್ಟಿಸುತ್ತಾರೆನ್ನುವ ಸಂಗತಿಯು, ಎಲ್ಲಾ ರೀತಿಯ ಗುಣಾತ್ಮಕ ಸಂಶೋಧನೆಗಳಿಗೆ ಆಧಾರಿತವಾಗಿರುವ ಪ್ರಮುಖ ತಾತ್ವಿಕ ಕಲ್ಪನೆಯಾಗಿದೆ” ಎಂಬುದು ಮೆರಿಯಮ್‌ಳ ಅಭಿಪ್ರಾಯವಾಗಿದೆ (ಮೆರಿಯಮ್, 1998, ಪು. 6). ಇನ್ನೂ ಮುಂದುವರೆದು ಆಕೆ, “ವಾಸ್ತವಿಕತೆಯು ವಸ್ತುನಿಷ್ಠ ಅಸ್ತಿತ್ವವಲ್ಲ; ಬದಲಾಗಿ ವಾಸ್ತವಿಕತೆಗೆ ಅನೇಕ ವ್ಯಾಖ್ಯಾನಗಳಿವೆ” (ಮೆರಿಯಮ್, 1998, ಪು. 22) ಎಂದು ತಿಳಿಸುತ್ತಾಳೆ. ಆದ್ದರಿಂದ, ಈ ತಾತ್ವಿಕ ಕಲ್ಪನೆಯನ್ನು ಸಮರ್ಥಿಸುತ್ತ ಹೇಳುವುದಾದರೆ, ಗುಣಾತ್ಮಕ ಸಂಶೋಧಕರ ಪ್ರಾಥಮಿಕ ಆಸಕ್ತಿಯು, ಜನರು ಸೃಷ್ಟಿಸಿದ ಅರ್ಥ ಅಥವಾ ಜ್ಞಾನವನ್ನು ಅರ್ಥಮಾಡಿಕೊಳ್ಳುವುದಾಗಿದೆ. ಈ ವಿಶ್ವದಲ್ಲಿ ಜನರು ಅವರ ಪ್ರಪಂಚ ಹಾಗೂ ಅನುಭವಗಳನ್ನು ಹೇಗೆ ಅರ್ಥಗರ್ಭಿತವಾಗಿಸುತ್ತಾರೆಂಬುದು ಗುಣಾತ್ಮಕ ಸಂಶೋಧಕರಿಗೆ ನಿಜಕ್ಕೂ ಆಸಕ್ತಿಯನ್ನುಂಟುಮಾಡುತ್ತದೆ. ಇದಲ್ಲದೆ, ಸಂಶೋಧನಾ ಪ್ರಕ್ರಿಯೆಯಲ್ಲಿನ ಅರ್ಥಸೃಷ್ಟಿಯನ್ನು ಕುರಿತ ಮೆರಿಯಮ್‌ಳ ಪರಿಕಲ್ಪನೆಯು, ಸ್ಟೇಕ್‌ನ ಬಹುಸ್ತರಗಳ ವಾಸ್ತವಿಕತೆ ಅಥವಾ ಜ್ಞಾನ ರಚನೆಯೊಡನೆ ಸಂರೇಖಣಗೊಂಡಿದೆ (align). ಆದರೆ ಓದುಗರು ಈ ರಚನೆ ಅಥವಾ ವ್ಯಾಖ್ಯಾನದಲ್ಲಿ ಸಿಲುಕಿಕೊಳ್ಳುತ್ತಾರೆಂದು ಮೆರಿಯಮ್ ನಿರೀಕ್ಷಿಸುವುದಿಲ್ಲ. ಅಂತಿಮ ವರದಿಯಲ್ಲಿ ವಾಸ್ತವಿಕತೆಯ ಸ್ಥಿತಿಯನ್ನು ಕುರಿತಾದ ಎರಡು ಸಾಲುಗಳ ವ್ಯಾಖ್ಯಾನ ಅಥವಾ ಅರ್ಥಸೃಷ್ಟಿಯನ್ನು ಮೆರಿಯಮ್ ವಿವರಿಸುತ್ತಾಳೆ:

ಸಂಶೋಧಕನು ವಾಸ್ತವಿಕತೆಯ ರಚನೆಯೊಂದನ್ನು ಸಂಶೋಧನೆಯ ಸನ್ನಿವೇಶಕ್ಕೆ ತರುತ್ತಾನೆ. ಇದು ಅಧ್ಯಯನಕೊಳ್ಳಪಟ್ಟಿರುವ ವಿದ್ಯಮಾನಕ್ಕೆ ಸಂಬಂಧಿಸಿದಂತೆ ಇತರೆ ಜನರ ರಚನೆಗಳು ಹಾಗೂ ವ್ಯಾಖ್ಯಾನಗಳೊಂದಿಗೆ ಪರಸ್ಪರ ಪ್ರತಿಕ್ರಿಯಿಸುತ್ತದೆ. ಈ ವಿಧದ ಅಧ್ಯಯನದ ಅಂತಿಮ ಸೃಜನೆಯು’ ಇತರರ ಅಭಿಪ್ರಾಯಗಳನ್ನು ತನ್ನ ಅಭಿಪ್ರಾಯಗಳ ಮೂಲಕ ಶೋಧಿಸಿದ ಸಂಶೋಧಕನ/ಳ ಮತ್ತೊಂದು ವ್ಯಾಖ್ಯಾನವಾಗಿದೆ (ಮೆರಿಯಮ್, 1998, ಪು. 22).

ಈ ಮೂರು ಪಠ್ಯಗಳಲ್ಲಿ ವ್ಯಾಪಿಸಿರುವ ಈ ಮೂರು ವಿಷಯ ಅಧ್ಯಯನ ವಿಧಾನಶಾಸ್ತ್ರಜ್ಞರ ವಿಭಿನ್ನ ಜ್ಞಾನಶಾಸ್ತ್ರೀಯ ಬದ್ಧತೆಯನ್ನು ಚರ್ಚಿಸಿದ ನಂತರ, ಜ್ಞಾನಶಾಸ್ತ್ರೀಯ ನಿಲುವನ್ನು ಕುರಿತಾದ ಹಾಗೂ ಯಿನ್, ಮೆರಿಯಮ್ ಮತ್ತು ಸ್ಟೇಕ್ ಇವರುಗಳ ವಿಷಯ ಅಧ್ಯಯನದ ಸಂಯೋಜನೆಯನ್ನು ಕುರಿತ ನನ್ನ ಸಮೀಪ ಗಮನದ ರೀತಿಯನ್ನು ಈ ನಿಲುವು ಹೇಗೆ ಪ್ರಭಾವಿಸುತ್ತದೆಯೆಂಬುದರ ಬಗ್ಗೆ ಒಂದು ಸಂಕ್ಷಿಪ್ತ ವಿವರಣೆಯೊಂದಿಗೆ ಈ ಭಾಗವನ್ನು ಮುಕ್ತಾಯಗೊಳಿಸಬೇಕೆಂಬುದು ನನ್ನ ಆಲೋಚನೆಯಾಗಿದೆ. ಒಬ್ಬ ಉದಯೋನ್ಮುಖ ಸಂಶೋಧಕನಾಗಿ ಜ್ಞಾನಶಾಸ್ತ್ರೀಯವಾಗಿ ನನ್ನನ್ನು ನಾನು

ರಚಿತವಾದ ಮಾದರಿಗೆ ಹೆಚ್ಚು ಹತ್ತಿರವಿರುವಾಗಿರುವಂತೆ ಭಾವಿಸುತ್ತೇನೆ. ಜ್ಞಾನವು ಸಾಮಾಜಿಕವಾಗಿ ರಚಿತಗೊಳ್ಳುತ್ತದೆಯಲ್ಲದೆ, ಜನರ ಸಾಮಾಜಿಕ ಆಚರಣೆಗಳಿಂದಾಗಿ ಉದ್ಭವಿಸುತ್ತದೆಂಬುದು ನನ್ನ ಅಭಿಪ್ರಾಯವಾಗಿದೆ; ಆದ್ದರಿಂದ, ಸಾಮಾಜಿಕ ವಾಸ್ತವಿಕತೆಯು ಜನರಿಂದ ಸೃಜಿಸಲ್ಪಡುತ್ತದೆ ಮತ್ತು ರಚಿಸಲ್ಪಡುತ್ತದೆಯಲ್ಲದೆ, ಜನರ ಮನಸ್ಸಿನಲ್ಲಿ ಹೆಚ್ಚಾಗಿ ಅಸ್ತಿತ್ವದಲ್ಲಿರುತ್ತದೆಂಬುದು ನನ್ನ ಪರಿಕಲ್ಪನೆಯಾಗಿದೆ. ಸಂಶೋಧನಾ ಪ್ರಯತ್ನಗಳು "ಸಾಂಸ್ಕೃತಿಕವಾಗಿ ಸೃಜಿತಗೊಂಡ ಹಾಗೂ ಐತಿಹಾಸಿಕವಾಗಿ ಸ್ಥಾಪಿತವಾದ ವಿಶ್ವದ ಸಾಮಾಜಿಕ ಜೀವನವನ್ನು ಕುರಿತ ವ್ಯಾಖ್ಯಾನಗಳನ್ನು ಅನ್ವೇಷಿಸುವ ಕಡೆಗೆ ಸಜ್ಜಾಗಿವೆ" ಎಂದು ನಾನು ನಂಬಿದ್ದೇನೆ (ಕ್ರಾಟಿ, 1998, ಪು. 67). ಈ ತಾತ್ವಿಕ ನಿಲುವಿನ ಕಾರಣದಿಂದಾಗಿ ನಾನು ಜ್ಞಾನಶಾಸ್ತ್ರೀಯವಾಗಿ ಯಿನ್‌ನೊಡನೆ ಅಸಮ್ಮತಿ ಹಾಗೂ ಮೆರಿಯಮ್ ಮತ್ತು ಸ್ಟೇಕ್‌ನೊಂದಿಗೆ ಸಮ್ಮತವನ್ನು ಹೊಂದಿರುವುದನ್ನು ಕಾಣುತ್ತೇನÉ. ಆದರೆ ನನ್ನ ಒಲವು ಡ್ಯೂವಿಯನ್ ವಾಸ್ತವಿಕವಾದದೊಂದಿಗೆ ಹೆಚ್ಚು ಸಮ್ಮತವಾಗಿರವುದರಿಂದ, ಪ್ರಸ್ತುತ ವಿಶ್ಲೇಷಣೆಯು ಯಿನ್ ಸೂಚಿಸಿರುವ ತಂತ್ರಗಳು, ಮಾರ್ಗದರ್ಶನಗಳು ಮತ್ತು ಸಾಧನಗಳ ಸಾಧನೆಯನ್ನು ಸ್ವೀಕರಿಸುತ್ತದೆ. ಅಂದರೆ, ನನ್ನ ರಚನಾವಾದದ ಒಲವುಗಳು ಕೇವಲ ಸ್ಟೇಕ್ ಮತ್ತು ಮೆರಿಯಮ್‌ರ ನಿರೂಪಣೆಗೆ ಮಾತ್ರ ನಾನು ಅಂಟಿಕೊಂಡಿರುವಂತೆ ಮಾಡಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಈ ಎಲ್ಲಾ ಮೂರು ಲೇಖಕರು ಪರಿಕಲ್ಪನೆ, ವಿನ್ಯಾಸ ಹಾಗೂ ಶಿಸ್ತುಬದ್ಧ ಸಂಶೋಧನೆಗೆ ನೀಡಿರುವ ಕೊಡುಗೆಯನ್ನು ಪರಿಗಣಿಸಿ, ಅವರ ಕೃತಿಗಳ ವಿಶ್ಲೇಷಣೆ ಹಾಗೂ ಸಂಶ್ಲೇಷಣೆಗೆ ನಾನು ಪ್ರಯತ್ನಿಸಿದ್ದೇನೆ (ಶೂಲ್ಮನ್, 1988).

## ವಿಷಯ ಹಾಗೂ ವಿಷಯ ಅಧ್ಯಯನದ ವ್ಯಾಖ್ಯಾನ

ವಿಷಯ ಅಧ್ಯಯನ ವಿಧಾನದ ತಮ್ಮ ಪಠ್ಯಪುಸ್ತಕಗಳಲ್ಲಿ ಈ ಮೂರು ಲೇಖಕರು ವಿಷಯ ಹಾಗೂ ವಿಷಯ ಅಧ್ಯಯನವನ್ನು ವಿಭಿನ್ನವಾಗಿ ವ್ಯಾಖ್ಯಾನಿಸಿದ್ದಾರೆ. ಉದಾಹರಣೆಗೆ, ಯಿನ್ (2002) ವಿಷಯವನ್ನು ಹೀಗೆ ವ್ಯಾಖ್ಯಾನಿಸಿದ್ದಾನೆ: "ವಿಷಯವು ಅದರ ನಿಜ ಜೀವನದ ಸಂದರ್ಭದೊಳಗಿನ ಒಂದು ಸಮಕಾಲೀನ ವಿದ್ಯಮಾನವಾಗಿದೆ. ವಿಶೇಷವಾಗಿ ವಿದ್ಯಮಾನ ಹಾಗು ಸಂದರ್ಭದ ನಡುವಿನ ಗಡಿಗಳು ಅಸ್ಪಷ್ಟವಾಗಿದ್ದು, ಸಂಶೋಧಕನು ವಿದ್ಯಮಾನ ಹಾಗೂ ಸಂದರ್ಭದ ಮೇಲೆ ಯಾವುದೇ ನಿಯಂತ್ರಣ ಹೊಂದಿಲ್ಲದಿದ್ದಾಗ ಇದು ಅನ್ವಯಿಸುತ್ತದೆ"(ಪು. 13). ವಿಷಯದ ಈ ವ್ಯಾಖ್ಯಾನವು; ವಿಷಯ ಅಧ್ಯಯನವನ್ನು ಒಂದು ವಿಧಿವತ್ತಾದ ಸಂಶೋಧನೆಯ ವಿಧಾನವಾಗಿ ಸಹ ಆತನು ಪ್ರತಿಪಾದಿಸುತ್ತಾನೆಂಬುದನ್ನು ವ್ಯಕ್ತಪಡಿಸುತ್ತದೆ. ಇತಿಹಾಸ, ಪ್ರಯೋಗ ಮತ್ತು ಸಮೀಕ್ಷೆಯಂತಹ ಇತರ ಸಂಶೋಧನಾ ತಂತ್ರಗಳು ಸಂಶೋಧಕರು ಆಸಕ್ತಿ ತಳೆಯುವ ವಿಷಯದ ಬಗ್ಗೆ ಸಂಶೋಧನೆ ಕೈಗೊಳ್ಳಲು ಸಾಮರ್ಥ್ಯವಿಲ್ಲದವು ಎಂಬುದು, ಈ ವ್ಯಾಖ್ಯಾನದಲ್ಲಿನ ಅಂತರ್ನಿಹಿತ (underlying) ಕಲ್ಪನೆಯಾಗಿದೆ. ಹೀಗಾಗಿ,

ಅವರಿಗೆ ವಿಷಯ ಅಧ್ಯಯನವೆಂದು ಕರೆಯಲ್ಪಡುವ ಅತ್ಯಂತ ನವೀನತಮ "ಸಮಗ್ರ ಸಂಶೋಧನಾ ತಂತ್ರ"ದ ಅಗತ್ಯವಿದೆ (ಯಿನ್, 2002, ಪು. 14). ಈ ವ್ಯಾಖ್ಯಾನದ ಹಿನ್ನೆಲೆಯಲ್ಲಿನ ಯಿನ್‌ನ ದೃಷ್ಟಿಕೋನದಲ್ಲಿ, ವಿಷಯ ಅಧ್ಯಯನವು ಒಂದು ಪ್ರಯೋಗಾಶ್ರಿತ ಶೋಧನೆ. ಮೇಲೆ ಪ್ರಸ್ತಾಪಿಸಲಾದ ವ್ಯಾಖ್ಯೆಗೆ ಹೊಂದಿಕೊಳ್ಳುವ ವಿಷಯ ಅಥವಾ ವಿಷಯಗಳ ಪರಿಶೋಧನೆಯನ್ನು ಇದು ಕೈಗೊಳ್ಳುತ್ತದೆ. ಆಸಕ್ತಿಯುತ ವಿದ್ಯಮಾನಕ್ಕೆ ಸಂಬಂಧಿಸಿದ "ಹೇಗೆ" ಮತ್ತು "ಏಕೆ" ಎಂಬ ಪ್ರಶ್ನೆಗಳನ್ನು ಇದು ನಿರ್ವಹಿಸುತ್ತದೆ. ಕಾರ್ಯಕ್ರಮ ಮೌಲ್ಯಮಾಪನಕ್ಕೆ ಇದು ವಿಶೇಷವಾಗಿ ಉಪಯಕ್ತವಾದುದೆಂದು ಆತನ ಅಭಿಪ್ರಾಯವಾಗಿದೆ. ಆತನ ಇತರೆ ತಾಂತ್ರಿಕ ವ್ಯಾಖ್ಯಾನವು ದತ್ತಾಂಶ ಸಂಗ್ರಹಣೆ ಹಾಗೂ ಅಧ್ಯಯನದ ಸನ್ನಿವೇಶಕ್ಕೆ ಸಂಬAಧಿಸಿದ ಅಂಶಗಳತ್ತ ಗಮನಸೆಳೆಯುತ್ತದೆ: "ದತ್ತಾಂಶ ಬಿಂದುಗಳಿಗಿAತಲೂ ಹೆಚ್ಚಿನ ಪರಿವರ್ತನಶೀಲ ಆಸಕ್ತಿಗಳನ್ನು" ಒಳಗೊಂಡ ಒಂದು ವಿಭಿನ್ನ ಸನ್ನಿವೇಶವನ್ನು ಪರೀಕ್ಷಿಸುವ ಸಲುವಾಗಿ ವಿಷಯ ಅಧ್ಯಯನವು ತ್ರಿಕೋನಿಕರಣಗೊಳಿಸುವ ಉದ್ದೇಶದಿಂದ ಅನೇಕ ಸಾಕ್ಷ್ಯಾಧಾರಗಳನ್ನು ಬಳಸಿಕೊಳ್ಳುತ್ತದೆ ಮತ್ತು ಸ್ವತಃ 'ದತ್ತಾಂಶ ಸಂಗ್ರಹಣೆ ಮತ್ತು ವಿಶ್ಲೇಷಣೆಗೆ ಸೈದ್ಧಾಂತಿಕ ಪ್ರತಿಪಾದನೆಗಳನ್ನು ಮುಂಚಿತವಾಗಿ ಅಭಿವೃದ್ಧಿಪಡಿಸಿಕೊಳ್ಳುತ್ತದೆ" (ಯಿನ್, 2002, ಪುಟಗಳು. 13-14). ವಿಷಯ ಅಧ್ಯಯನವನ್ನು ಒಂದು ಸಂಶೋಧನಾ ತಂತ್ರವಾಗಿ ಬಳಸುವಲ್ಲಿನ ವಿನ್ಯಾಸದ ಅಂಶಗಳು ಹಾಗೂ ಹಂತಗಳಲ್ಲಿ ಏಕತೆ ಹಾಗೂ ಸಾಮಂಜಸ್ಯಕ್ಕೆ ಸಂಬಂಧಿಸಿದಂತೆ ಆತನ ವಿಧಾನವು ಎಷ್ಟು ನಿಖರವೆಂಬುದನ್ನು ಈ ಕಾಳಜಿಯು ಸೂಚಿಸುತ್ತದೆ. ಆತನ ನಿಲುವಿನಿಂದ ನೋಡಿದಾಗ, ಸಂಶೋಧನಾ ಪ್ರಕ್ರಿಯೆಯಲ್ಲಿ ಪ್ರತಿಯೊಂದು ನಡೆ ಅಥವಾ ನಿರ್ಧಾರವನ್ನು ಕೈಗೊಳ್ಳುವಾಗ ಸಂಶೋಧಕರು ವಿಷಯದ ಸೈದ್ಧಾಂತಿಕ ಪ್ರತಿಪಾದನೆಗಳು ಹಾಗೂ ಲಕ್ಷಣಗಳಿಗನುಗುಣವಾಗಿ ಅವುಗಳ ಹಿಂದಿನ ತರ್ಕವನ್ನು ಒದಗಿಸುವಂತಿರಬೇಕು.

ವಿಷಯ ಅಧ್ಯಯನದ ಸ್ಟೇಕಿಯನ್ ದೃಷ್ಟಿಕೋನದಲ್ಲಿ, ವಿಷಯ ಅಥವಾ ವಿಷಯ ಅಧ್ಯಯನದ ನಿಖರವಾದ ವ್ಯಾಖ್ಯಾನವು ಸಾಧ್ಯವಿಲ್ಲ. ಏಕೆಂದರೆ, ವಿಷಯಗಳು ಅಥವಾ ವಿಷಯ ಅಧ್ಯಯನಗಳಿಗೆ ಆತನು ನೀಡುವ ನಿಖರವಾದ ವ್ಯಾಖ್ಯೆಗಳು, ಇತರೆ ಅಧ್ಯಯನದ ವಿಭಾಗಗಳಲ್ಲಿ ವಿಷಯ ಅಧ್ಯಯನವನ್ನು ಬಳಸುವವರು ನೀಡುವ ವ್ಯಾಖ್ಯೆಯೊಡನೆ ಹೊಂದಾಣಿಕೆಯಾಗುವ ಸಾಧ್ಯತೆಯು ತುಂಬಾ ಕಡಿಮೆ. ವಿಷಯದ ವ್ಯಾಖ್ಯೆಗೆ ಸಂಬಂಧಿಸಿದಂತೆ ಸ್ಟೇಕ್ (1995), ಲೂಯಿಸ್ ಸ್ಮಿತ್‌ನ (1978) ವ್ಯಾಖ್ಯೆಯನ್ನು ಒಪ್ಪಿಕೊಳ್ಳುತ್ತಾನೆ: ಸಂಶೋಧಕರು ವಿಷಯವನ್ನು ಒಂದು "ಸುತ್ತುವರಿದ (bounded) ವ್ಯವಸ್ಥೆಯಾಗಿ" ನೋಡಬೇಕು ಹಾಗೂ ಅದನ್ನು "ಒಂದು ಪ್ರಕ್ರಿಯೆ ಎಂಬುದಕ್ಕಿಂತಲೂ ಹೆಚ್ಚಾಗಿ, ಒಂದು ವಸ್ತುವಾಗಿ" ಶೋಧನೆ ಮಾಡಬೇಕು (ಪು. 2). ಆತನು ಸ್ವತಃ ತನ್ನ ಪರಿಕಲ್ಪನೆಯಲ್ಲಿ ವಿಷಯಕ್ಕೆ ಸಂಬಂಧಿಸಿದ ಕೆಲವು ಗುಣವಿಶೇಷಗಳನ್ನು ವ್ಯಕ್ತಪಡಿಸುತ್ತಾನೆ: ವಿಷಯವು ಒಂದು "ನಿರ್ದಿಷ್ಟ,

ಸಂಕೀರ್ಣ, ಕಾರ್ಯಶೀಲ ವಸ್ತು." ಹೆಚ್ಚು ನಿರ್ದಿಷ್ಟವಾಗಿ, "ಒಂದು ಸಂಯೋಜಿತ ವ್ಯವಸ್ಥೆ." ಇದು, "ಒಂದು ಗಡಿ ಹಾಗೂ ಕಾರ್ಯಾಚರಿಸುವ ಭಾಗಗಳನ್ನು ಹೊಂದಿದೆ" ಹಾಗೂ ಉದ್ದೇಶಪೂರ್ವಕವಾದುದು (ಸಾಮಾಜಿಕ ವಿಜ್ಞಾನಗಳು ಹಾಗೂ ಮಾನವ ಸೇವೆಗಳಲ್ಲಿ) (ಪು. 2). ಈ ವ್ಯಾಖ್ಯಾನಕ್ಕನುಗುಣವಾಗಿ ತನ್ನ ಪುಸ್ತಕದಲ್ಲಿ ಆತನು ನಿರೂಪಿಸಿರುವ ವಿಧಾನಗಳು; ಕಾರ್ಯಕ್ರಮಗಳು ಹಾಗೂ ಜನರನ್ನು ಅಧ್ಯಯನಮಾಡಲು ಹೆಚ್ಚು ಉಪಯುಕ್ತವಾಗಿದ್ದು, ಘಟನೆಗಳು ಮತ್ತು ಪ್ರಕ್ರಿಯೆಗಳನ್ನು ಅಧ್ಯಯನಮಾಡಲು ಹೆಚ್ಚು ಉಪಯುಕ್ತವಲ್ಲವೆಂಬುದು ಸ್ಟೇಕ್‌ನ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವು ಯಿನ್‌ನ ಅಭಿಪ್ರಾಯದೊಡನೆ ಭಾಗಶಃ ಹೊಂದಾಣಿಕೆಯಾಗುತ್ತದೆ. ವಿಷಯ ಅಧ್ಯಯನ ವಿಧಾನವು ಕಾರ್ಯಕ್ರಮ ಮೌಲ್ಯಮಾಪನಕ್ಕೆ ಅತ್ಯಂತ ಸೂಕ್ತವಾದುದೆಂಬುದು ಯಿನ್‌ನ ಅಭಿಪ್ರಾಯವಾಗಿದೆ. ಇದಲ್ಲದೆ, ಗುಣಾತ್ಮಕ ಸಂಶೋಧನೆಯ ನಾಲ್ಕು ವಿವರಣಾತ್ಮಕ ಗುಣಲಕ್ಷಣಗಳನ್ನು ಸ್ಟೇಕ್ ವ್ಯಕ್ತಪಡಿಸುತ್ತಾನೆ. ಇವುಗಳು ಗುಣಾತ್ಮಕ ವಿಷಯ ಅಧ್ಯಯನಗಳಿಗೂ ಅನ್ವಯಿಸುತ್ತವೆ. ಅವುಗಳೆಂದರೆ: "ಸಮಗ್ರತೆ", "ಪ್ರಾಯೋಗಿಕ", "ವಿವರಣಾತ್ಮಕ" ಹಾಗೂ "ಅನುಭೂತಿಯುತ." ಸಮಗ್ರತೆಯೆಂದರೆ ವಿದ್ಯಮಾನ ಹಾಗೂ ಅದರ ಸಂದರ್ಭಗಳ ನಡುವಿನ ಪರಸ್ಪರ ಸಂಬಂಧವನ್ನು ಸಂಶೋಧಕರು ಪರಿಗಣಿಸತಕ್ಕದ್ದು. ಇದು ವಿಷಯವನ್ನು ವ್ಯಾಖ್ಯಾನಿಸುವಾಗ ಪ್ರತ್ಯೇಕಿಸಲಾಗದ ಸಂಬಂಧದವನ್ನು ಕುರಿತ ಯಿನ್‌ನ ಪ್ರಸ್ತಾಪದಂತೆಯೆ ಇದೆ. ಪ್ರಾಯೋಗಿಕ ಎಂದರೆ ಕ್ಷೇತ್ರದಲ್ಲಿನ ವೀಕ್ಷಣೆಯ ಆಧಾರದಲ್ಲಿ ಸಂಶೋಧಕರು ಅವರ ಅಧ್ಯಯನವನ್ನು ಕೈಗೊಳ್ಳತಕ್ಕದ್ದು. ವಿವರಣಾತ್ಮಕ ಎಂದರೆ ಸಂಶೋಧಕರು ಅವರ ಅಂತಃಪ್ರಜ್ಞೆಗನುಸಾರವಾಗಿ ಕಾರ್ಯನಿರ್ವಹಿಸಬೇಕು ಹಾಗೂ ಸಂಶೋಧನೆಯನ್ನು ಮೂಲಭೂತವಾಗಿ ರಚನಾತ್ಮಕ ಜ್ಞಾನಶಾಸ್ತ್ರದೊಂದಿಗೆ ಹೊಂದಾಣಿಕೆಯಾಗುವ ಸಂಶೋಧಕ ಹಾಗೂ ವಿಷಯದ ನಡುವಿನ ಪರಸ್ಪರ ಕ್ರಿಯೆಯಾಗಿ ನೋಡತಕ್ಕದ್ದು. ಅಂತಿಮವಾಗಿ, ಅನುಭೂತಿಯುತ ಎಂದರೆ, ಸಂಶೋಧಕರು ಸಂಶೋಧನೆಗೊಳಪಡುವವರ ಪ್ರಾತಿನಿಧಿಕ ಅನುಭವಗಳನ್ನು ಪರಾನುಭೂತಿಯಿಂದ ಪ್ರತಿಬಿಂಬಿಸತಕ್ಕದ್ದು.

ಮೆರಿಯಮ್ (1998) ಪ್ರಕಾರ, ವಿಷಯ ಅಧ್ಯಯನ ಸಂಶೋಧನೆಯ ವಿಶಿಷ್ಟ ಲಕ್ಷಣವು ವಿಷಯದ ಎಲ್ಲೆಯನ್ನು ಗುರುತಿಸುವುದಾಗಿದೆ. ಆಕೆಯ ವ್ಯಾಖ್ಯೆಯು ಸ್ಮಿತ್‌ನ (1978) ದೃಷ್ಟಿಕೋನವಾದ ವಿಷಯವು ಒಂದು ಸುತ್ತುವರಿದ ವ್ಯವಸ್ಥೆ ಹಾಗೂ ಸ್ಟೇಕ್‌ನ ವಿಷಯವು ಒಂದು ಸಂಯೋಜಿತ ವ್ಯವಸ್ಥೆಯೆಂಬ ಅಭಿಪ್ರಾಯಗಳಿಗನುಗಣವಾಗಿದೆ. ಆಕೆಯು ವಿಷಯವನ್ನು "ಒಂದು ವಸ್ತು, ಏಕೈಕ ಅಸ್ತಿತ್ವ ಹಾಗೂ ಎಲ್ಲೆಗಳಿಂದ ಸುತ್ತುವರಿದ ಒಂದು ಘಟಕವಾಗಿ" ನೋಡುತ್ತಾಳೆ (ಪು. 27). ನಂತರ; ವಿಷಯವು ಒಬ್ಬ ವ್ಯಕ್ತಿ, ಒಂದು ಕಾರ್ಯಕ್ರಮ, ಒಂದು ಗುಂಪು, ಒಂದು ನಿರ್ದಿಷ್ಟ ನೀತಿ, ಹೀಗೆ ಏನಾದರೂ ಆಗಿರಬಹುದು. ಇದು ಯಿನ್ ಮತ್ತು ಸ್ಟೇಕ್ ಪಟ್ಟಿಗಿಂತ ವ್ಯಾಪಕವಾಗಿದೆ. ಮೈಲ್ಸ್

ಮತ್ತು ಹ್ಯೂಬರ್‌ಮನ್ (1994) ಅಭಿಪ್ರಾಯಗಳಿಂದ ಪ್ರಭಾವಿತವಾದ ಮೆರಿಯಮ್‌ನ ದೃಷ್ಟಿಕೋನದ ಪ್ರಕಾರ, "ವಿಷಯವು ಒಂದು ಪರಿವೃತ (bounded) ಸಂದರ್ಭದಲ್ಲಿ ಸಂಭವಿಸುವ ಒಂದು ವಿದ್ಯಮಾನವಾಗಿದೆ" (ಮೆರಿಯಮ್, 1998, ಪು. 27 ರಲ್ಲಿ ಉಲ್ಲೇಖಿಸಲಾಗಿದೆ). ಎಲ್ಲಿಯವರೆಗೆ ಸಂಶೋಧಕರು ಆಸಕ್ತಿಯ ವಿದ್ಯಮಾನವನ್ನು ಸೂಚಿಸುತ್ತಾರೊ ಹಾಗೂ ಅವರು ಏನನ್ನು ಸಂಶೋಧಿಸುತ್ತಾರೆಂಬುದಕ್ಕೆ ಎಲ್ಲೆಗಳನ್ನು ಗುರುತಿಸುತ್ತಾರೊ ಅಥವಾ "ಪರಿಮಿತಿಗೆ ಒಳಪಡುತ್ತಾರೊ" ಅಲ್ಲಿಯವರೆಗೆ ಅದನ್ನು ವಿಷಯವೆಂದು ಅವರು ಹೆಸರಿಸಬಹುದು. ಸಂಕ್ಷಿಪ್ತವಾಗಿ ಹೇಳುವುದಾದರೆ, ಮೆರಿಯಮ್‌ಳ ವ್ಯಾಖ್ಯೆಯು ಯಿನ್ ಮತ್ತು ಸ್ಟೇಕ್‌ರ ವ್ಯಾಖ್ಯೆಗಳಿಗಿಂತ ವಿಸ್ತಾರವಾದುದು. ಇದು ಗುಣಾತ್ಮಕ ವಿಷಯ ಅಧ್ಯಯನ ತಂತ್ರವನ್ನು ಹೆಚ್ಚು ವ್ಯಾಪಕವಾದ ವಿಷಯಗಳ ಅಧ್ಯಯನದಲ್ಲಿ ಉಪಯೋಗಿಸಲು ಅವಶ್ಯವಿರುವ ನಮ್ಯತೆಯನ್ನು (flexibility) ಒದಗಿಸುತ್ತದೆ. ವಿಷಯ ಅಧ್ಯಯನ ಸಂಶೋಧನೆಯ ವ್ಯಾಖ್ಯೆಗೆ ಸಂಬಂಧಿಸಿದಂತೆ ಮೆರಿಯಮ್ ಗುಣಾತ್ಮಕ ವಿಷಯ ಅಧ್ಯಯನವನ್ನು; "ಒಂದು ಕಾರ್ಯಕ್ರಮ, ಸಂಸ್ಥೆ, ವ್ಯಕ್ತಿ, ಪ್ರಕ್ರಿಯೆ ಅಥವಾ ಒಂದು ಸಾಮಾಜಿಕ ಘಟಕದ ಪರಿವೃತ ವಿದ್ಯಮಾನದ ಒಂದು ಆಳವಾದ ಹಾಗೂ ಸಮಗ್ರವಾದ ವಿವರಣೆ ಮತ್ತು ವಿಶ್ಲೇಷಣೆಯೆಂಬುದಾಗಿ (ಪು. xiii) ವ್ಯಾಖ್ಯಾನಿಸುತ್ತಾಳೆ. ವಿಷಯ ಅಧ್ಯಯನ ವಿಧಾನವನ್ನು ವಿಷಯ ಕಾರ್ಯ, ವಿಷಯ ವಿಧಾನ, ವಿಷಯ ಇತಿಹಾಸ (ವಿಷಯ ದಾಖಲೆಗಳು) ಇವುಗಳಿಂದ ಮತ್ತಷ್ಟು ವಿಭಿನ್ನವಾಗಿ ಕಾಣುವಂತೆ ಮಾಡಲು ಆಕೆಯು ಅದರ ವಿಶಿಷ್ಟ ವಿಭಿನ್ನ ಗುಣಗಳ ಬಗ್ಗೆ ಒತ್ತು ನೀಡುತ್ತಾಳೆ: ವಿಷಯ ಅಧ್ಯಯನವು; ನಿರ್ದಿಷ್ಟ (ಇದು ಒಂದು ನಿರ್ದಿಷ್ಟ ಸನ್ನಿವೇಶ, ಘಟನೆ, ಕಾರ್ಯಕ್ರಮ ಅಥವಾ ವಿದ್ಯಮಾನದತ್ತ ಗಮನಹರಿಸುತ್ತದೆ); ವಿವರಣಾತ್ಮಕ (ಅಧ್ಯಯನಕ್ಕೊಳಪಟ್ಟಿರುವ ವಿದ್ಯಮಾನದ ಬಗ್ಗೆ ಸಮೃದ್ಧವಾದ ಹಾಗೂ ಗಾಢವಾದ ವಿವರಣೆಯನ್ನು ನೀಡುತ್ತದೆ); ಹಾಗೂ ಅನ್ವೇಷಣಾತ್ಮಕವಾದುದು (ಅಧ್ಯಯನಕ್ಕೊಳಪಟ್ಟಿರುವ ವಿದ್ಯಮಾನವನ್ನು ಕುರಿತ ಓದುಗನ ಗ್ರಹಿಕೆಯ ಬಗ್ಗೆ ಬೆಳಕು ಚೆಲ್ಲುತ್ತದೆ). ಯಿನ್ ವಿಷಯ ಅಧ್ಯಯನವನ್ನು ಒಂದು ವಿಧಿವತ್ತಾದ ಸಂಶೋಧನಾ ತಂತ್ರವೆಂದು ಪ್ರತಿಪಾದಿಸಿರುವ ರೀತಿಯಲ್ಲಿಯೆ ಮೆರಿಯಮ್ ವಿಷಯ ಅಧ್ಯಯನವನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸಲ್ಪಟ್ಟ ಹಾಗೂ ಸ್ಪಷ್ಟವಾಗಿ ಸಂರಚಿಸಲ್ಪಟ್ಟ ಸಂಶೋಧನಾ ವಿಧಾನವಾಗಿಸಲು ಸಹಾಯಮಾಡುವ ಜವಾಬ್ದಾರಿಯನ್ನು ವಹಿಸಿಕೊಂಡಂತೆ ಕಾಣುತ್ತದೆ. ಏಕೆಂದರೆ, ಆಕೆಯು ಇದರ ಸರ್ವೋತ್ಕೃಷ್ಟ ಹಾಗೂ ವಿಲಕ್ಷಣವಾದ ಲಕ್ಷಣಗಳನ್ನು ಎತ್ತಿ ತೋರಿಸುತ್ತಾಳೆ, ಆ ಮೂಲಕ ಇತರೆ ಗುಣಾತ್ಮಕ ಸಂಶೋಧನಾ ವಿಧಾನಗಳಿಂದ ಪ್ರತ್ಯೇಕವಾದ ಒಂದು ಸಂಶೋಧನಾ ತಂತ್ರವಾಗಿ ಉದಯೋನ್ಮುಖ ಸಂಶೋಧಕರು ಇದನ್ನು ಉಪಯೋಗಿಸಬಹುದಾಗಿದೆ.

## ವಿಷಯ ಅಧ್ಯಯನದ ವಿನ್ಯಾಸ

ಯಿನ್, ಆತನ ಪುಸ್ತಕದ ಉಪಶೀರ್ಷಿಕೆಯು ಸೂಚಿಸುವಂತೆ, ವಿಷಯ ಅಧ್ಯಯನದ ವಿನ್ಯಾಸಕ್ಕೆ ಅತ್ಯಂತ ಹೆಚ್ಚಿನ ಒತ್ತನ್ನು ನೀಡುತ್ತಾನೆ. ಆತನ ಪುಸ್ತಕದ ಉದ್ದೇಶವನ್ನು ವಿವರಿಸುವಾಗ ನಾನು ಈ ಮೊದಲೆ ಪ್ರಸ್ತಾಪಿಸಿದಂತೆ; ವಿಷಯ ಅಧ್ಯಯನವು, ಸಾಮಾಜಿಕ ವಿಜ್ಞಾನಿಗಳು ಬಳಸುವ ಇತರೆ ಸಂಶೋಧನಾ ತಂತ್ರಗಳಲ್ಲಿನ "ಕ್ರೋಢೀಕೃತ ವಿನ್ಯಾಸ"ವನ್ನು ಹೊಂದಿಲ್ಲವೆಂಬುದನ್ನು ಯಿನ್ ಗಮನಿಸುತ್ತಾನೆ. ಇದೇ ಕಾರಣಕ್ಕಾಗಿ ಕೆಲವು ಸಂಶೋಧಕರು ವಿಷಯ ಅಧ್ಯಯನಕ್ಕೆ, ಗಮನಾರ್ಹ ಸಂಶೋಧನಾ ವಿಧಾನವೊಂದಕ್ಕೆ ಸಲ್ಲಬೇಕಾದ ಮಾನ್ಯತೆಯನ್ನು ನೀಡುವುದಿಲ್ಲ. "ಇತರೆ ಸಂಶೋಧನಾ ತಂತ್ರಗಳಲ್ಲಿರುವಂತೆ ವಿಷಯ ಅಧ್ಯಯನಗಳಿಗೆ ಸಂಶೋಧನಾ ವಿನ್ಯಾಸಗಳ ಸಮಗ್ರ "ಕ್ಯಾಟಲಾಗ್‌ಅನ್ನು" ಇನ್ನೂ ಅಭಿವೃದ್ಧಿಪಡಿಸಲಾಗಿಲ್ಲ" (ಯಿನ್, 2002, ಪು. 19) ಎಂದು ಯಿನ್ ಅಂತಿಮವಾಗಿ ಅಭಿಪ್ರಾಯಪಡುತ್ತಾನೆ. ಹೀಗಾಗಿ ಆತನು ಈ ಕ್ಯಾಟಲಾಗ್‌ನ್ನು ಅಭಿವೃದ್ಧಿಪಡಿಸಲು ಮುಂದಾಗುತ್ತಾನೆ. ಸಂಶೋಧನಾ ಪ್ರಕ್ರಿಯೆಯ ಪ್ರತಿಯೊಂದು ಹಂತದಲ್ಲಿ ತುಂಬಾ ಎಚ್ಚರಿಕೆಯಿಂದ ವಿನ್ಯಾಸದ ನಿರೂಪಣೆಯ ನಿಖರವಾದೊಂದು ವಿವರಣಾತ್ಮಕ ಹಾಗೂ ಸಮಗ್ರ ಕಾರ್ಯವಿಧಾನವನ್ನು ಯಿನ್ ಪ್ರಸ್ತುತಪಡಿಸುತ್ತಾನೆ. ಇಡೀ ಸಂಶೋಧನೆಯನ್ನು ವರದಿಮಾಡುವುದಕ್ಕೆ ಸಂಬಂಧಿಸಿದಂತೆ, ಈ ಹಿಂದಿನ ಸೈದ್ಧಾಂತಿಕ ಪ್ರತಿಪಾದನೆಗಳ ಹಿನ್ನೆಲೆಯಲ್ಲಿ ಸಂಶೋಧನಾ ಪ್ರಶ್ನೆಗಳನ್ನು ರಚಿಸುವುದರಿಂದ ಹಿಡಿದು ದತ್ತಾಂಶದ ಸಂಗ್ರಹ ಹಾಗೂ ವಿಶ್ಲೇಷಣೆಯನ್ನೊಳಗೊಂಡಂತೆ ಸಂಶೋಧನಾ ಪ್ರಕ್ರಿಯೆಯ ಪ್ರತಿಯೊಂದು ಹಂತದ ಎಚ್ಚರಿಕೆಯ ಅವಲೋಕನವನ್ನು ಇದು ಒಳಗೊಂಡಿದೆ.

ವಿನ್ಯಾಸವನ್ನು; "ಪ್ರಾಯೋಗಿಕ ದತ್ತಾಂಶವನ್ನು ಅಧ್ಯಯನದ ಪ್ರಾರಂಭಿಕ ಸಂಶೋಧನಾ ಪ್ರಶ್ನೆಗಳು ಹಾಗೂ ಅಂತಿಮವಾಗಿ ಅದರ ನಿರ್ಣಯಗಳಿಗೆ ಸಂಪರ್ಕಿಸುವ ತಾರ್ಕಿಕ ಕ್ರಮವೆಂದು" (ಪು. 20) ವ್ಯಾಖ್ಯಾನಿಸುವ ಯಿನ್ (2002), ವಿಷಯ ಅಧ್ಯಯನ ಸಂಶೋಧಕರು ಉಪಯೋಗಿಸಬಹುದಾದ ನಾಲ್ಕು ವಿನ್ಯಾಸ ವಿಧಾನಗಳನ್ನು ಸೂಚಿಸುತ್ತಾನೆ. ಇವುಗಳೆಂದರೆ ಏಕ ಸಮಗ್ರ ವಿನ್ಯಾಸ, ಏಕ ಅಂತಃಸ್ಥಾಪಿತ (Embedded) ವಿನ್ಯಾಸ, ಬಹು ಸಮಗ್ರ ವಿನ್ಯಾಸ ಹಾಗೂ ಬಹು ಅಂತಃಸ್ಥಾಪಿತ ವಿನ್ಯಾಸ. ಸಮಗ್ರ ವಿನ್ಯಾಸಗಳಿಗೆ ಒಂದು ಘಟಕದ ವಿಶ್ಲೇಣೆಯ ಅವಶ್ಯಕತೆಯಿದ್ದು, ಅಂತಃಸ್ಥಾಪಿತ ವಿನ್ಯಾಸಗಳಿಗೆ ಬಹುಘಟಕಗಳ ವಿಶ್ಲೇಷಣೆಯ ಅವಶ್ಯಕತೆಯಿರುತ್ತದೆ. ಕಲಿಕೆಯ ಹಂತದಲ್ಲಿರುವ ಸಂಶೋಧಕರು ಅವರ ಸಂಶೋಧನಾ ಪ್ರಶ್ನೆಗಳಿಗೆ ಗರಿಷ್ಠ ಕಾರಣತ್ವವನ್ನು ಒದಗಿಸುವಂತಹ ವಿನ್ಯಾಸವನ್ನು ಆಯ್ಕೆಮಾಡಿ, ಪ್ರತಿಯೊಂದು ವಿನ್ಯಾಸದ ಸಾಮರ್ಥ್ಯಗಳು ಮತ್ತು ಮಿತಿಗಳನ್ನು ಪರಿಗಣಿಸಬೇಕು ಹಾಗೂ ಈ ಪ್ರತಿಯೊಂದನ್ನೂ

ಅನುಷ್ಠಾನಗೊಳಿಸುವಲ್ಲಿ ಕಂಡುಬರುವ ಅಪಾಯಗಳನ್ನು ತಪ್ಪಿಸಿಕೊಳ್ಳಬೇಕೆಂದು ಯಿನ್ ಸಲಹೆ ನೀಡುತ್ತಾನೆ.

ಯಿನ್‌ನ ದೃಷ್ಟಿಕೋನದಲ್ಲಿ ವಿಷಯ ಅಧ್ಯಯನ ಸಂಶೋಧನಾ ವಿಧಾನವು ಐದು ಅಂಗಗಳನ್ನು ಒಳಗೊಂಡಿದೆ: ಅವೆಂದರೆ, ಅಧ್ಯಯನದ ಪ್ರಶ್ನೆಗಳು; ಅದರ ಪ್ರತಿಪಾದನೆಗಳು (ಇದ್ದಲ್ಲಿ); ವಿಶ್ಲೇಷಣೆಯ ಘಟಕ(ಗಳು); ದತ್ತಾಂಶವನ್ನು ಪ್ರತಿಪಾದನೆಗಳೊಂದಿಗೆ ಸಂಬಂಧಿಸಿರುವ ತರ್ಕ; ಹಾಗೂ ಫಲಿತಾಂಶಗಳನ್ನು ವ್ಯಾಖ್ಯಾನಿಸುವ ಮಾನದಂಡಗಳು. ಶೋಧನೆಯನ್ನು ವಿನ್ಯಾಸಗೊಳಿಸುವಾಗ ಈ ಅಂಶಗಳು ಪರಸ್ಪರ ಏಕತೆಯಿಂದ ಕೂಡಿದ್ದು, ಸಮಂಜಸವಾಗಿರಬೇಕೆಂಬುದನ್ನು ಸಂಶೋಧಕನು ಖಾತರಿಪಡಿಸಿಕೊಳ್ಳಬೇಕು. ವಿಷಯ ಅಧ್ಯಯನ ವಿಧಾನದಲ್ಲಿ ದತ್ತಾಂಶ ವಿಶ್ಲೇಷಣೆಯ ಯೋಜನೆಗೆ ಸಂಬಂಧಿಸಿದ ನಾಲ್ಕನೆ ಮತ್ತು ಐದನೆ ಅಂಗಕ್ಕೆ ಯಿನ್ ಹೆಚ್ಚಿನ ಗಮನಹರಿಸಲು ನಿರ್ದೇಶಿಸುತ್ತಾನೆ. ವಿಷಯ ಅಧ್ಯಯನ ಸಂಶೋಧಕರು ಅವರ ಸಂಶೋಧನೆಯ ವಿಶ್ಲೇಷಣಾತ್ಮಕ ಕಾರ್ಯಾಚರಣೆಗೆ ಸದೃಢ ಅಡಿಪಾಯವನ್ನು ಹೊಂದಲು, ಈ “ಅತಿ ಕಡಿಮೆ ಅಭಿವೃದ್ಧಿ ಹೊಂದಿದ ಅಂಗಗಳನ್ನು” ಅತ್ಯಂತ ಪ್ರಜ್ಞಾಪೂರ್ವಕವಾಗಿ ಹಾಗೂ ತೀವ್ರವಾಗಿ ಯೋಜಿಸಬೇಕೆಂದು ಯಿನ್ ಸಲಹೆ ನೀಡುತ್ತಾನೆ (ಯಿನ್, 2002, ಪು. 26). ಈ ಅಂಗಗಳಿಗೆ ಸಂಬಂಧಿಸಿದಂತೆ ಯಾವುದೆ ದತ್ತಾಂಶ ಸಂಗ್ರಹಣೆಯನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಸಂಶೋಧನೆಗೊಳಪಟ್ಟಿರುವ ವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧಕರು ಸಂಬಂಧಿತ ಸಾಹಿತ್ಯವನ್ನು ವಿಮರ್ಶಿಸಬೇಕಾದ ಹಾಗೂ ಸೈದ್ಧಾಂತಿಕ ಪ್ರತಿಪಾದನೆಗಳನ್ನು ಸೇರಿಸಬೇಕಾದ ಅವಶ್ಯಕತೆಯನ್ನು ಯಿನ್ ಒತ್ತಿ ಹೇಳುತ್ತಾನೆ. ಇದರಿಂದಾಗಿ ಅದು; ಆಧಾರಿತ ಸಿದ್ಧಾಂತಗಳು ಹಾಗೂ ಜನಾಂಗಶಾಸ್ತ್ರದಂತಹ ವಿಧಾನಶಾಸ್ತ್ರಗಳಿಂದ ವಿಭಿನ್ನವಾಗಿ ನಿಲ್ಲುತ್ತದೆ. ವಿಷಯ ಅಧ್ಯಯನ ವಿನ್ಯಾಸಕ್ಕೆ ಸಂಬಂಧಿಸಿದಂತೆ ಯಿನ್‌ನ ನಿರೂಪಣೆಯ ಮತ್ತೊಂದು ಅಂಶವೇನೆಂದರೆ, ವಿನ್ಯಾಸದ ಗುಣಮಟ್ಟವನ್ನು ನಾಲ್ಕು ಮಾನದಂಡಗಳಿಗನುಗುಣವಾಗಿ ಮಾಪನಮಾಡಬೇಕೆಂಬುದು ಆತನ ಸಲಹೆಯಾಗಿದೆ. ಅವುಗಳೆಂದರೆ; ರಚನಾ ಸಿಂಧುತ್ವ, ಆಂತರಿಕ ಸಿಂಧುತ್ವ, ಬಾಹ್ಯ ಸಿಂಧುತ್ವ ಹಾಗೂ ವಿಶ್ವಾಸಾರ್ಹತೆ. ಶೋಧನಾ ಪ್ರಕ್ರಿಯೆಯ ಪ್ರತಿ ಹಂತದಲ್ಲಿ ಈ ಪರಿಸ್ಥಿತಿಗಳನ್ನು ಗರಿಷ್ಠಗೊಳಿಸುವುದು, ತೀವ್ರವಾದ ಹಾಗೂ ದೃಢವಾದ ವಿಷಯ ಅಧ್ಯಯನ ವಿನ್ಯಾಸಗಳನ್ನು ಅಭಿವೃದ್ಧಿಪಡಿಸಲಿಚ್ಛಿಸುವ ಸಂಶೋಧಕರ ಜವಾಬ್ದಾರಿಯಾಗಿದೆ. ಕೊನೆಯದಾಗಿ, ಸಂಶೋಧನೆಯ ಪ್ರಾರಂಭದಲ್ಲಿಯ ವಿವರವಾದ ವಿನ್ಯಾಸದ ಸಿದ್ಧತೆಗೆ ಯಿನ್ ಸಾಕಷ್ಟು ಒತ್ತು ನೀಡುತ್ತಾನೆ ಹಾಗೂ ದತ್ತಾಂಶ ಸಂಗ್ರಹಣೆಯನ್ನು ಪ್ರಾರಂಭಿಸಿದ ನಂತರ ಸಣ್ಣಪುಟ್ಟ ಬದಲಾವಣೆಗಳನ್ನು ಮಾಡಿಕೊಳ್ಳುವಂತೆ ಸಂಶೋಧಕರಿಗೆ ಸಲಹೆ ನೀಡುತ್ತಾನೆ. ಯಿನ್‌ನ ದೃಷ್ಟಿಕೋನದಲ್ಲಿ ಸಂಶೋಧಕರು, ಪ್ರಮುಖ ಬದಲಾವಣೆಗಳನ್ನು ಮಾಡಬೇಕಾದಲ್ಲಿ, ಪರಿಕಲ್ಪನೆಯ ಮೊದಲನೆ ಹಂತಕ್ಕೆ ಹಿಂತಿರುಗಿ ಅಧ್ಯಯನವನ್ನು ವಿನ್ಯಾಸಗೊಳಿಸಲು ಪ್ರಾರಂಭಿಸಬೇಕು.

ವಿಷಯ ಅಧ್ಯಯನ ವಿಧಾನಕ್ಕೆ ದೃಢವಾದ ಮತ್ತು ಸಂರಚನಾತ್ಮಕ ವಿನ್ಯಾಸವನ್ನು ಸೂಚಿಸುವ ಯಿನ್‌ಗೆ ವಿರುದ್ಧವಾಗಿ, ಸಂಶೋಧಕರು ವಿನ್ಯಾಸದಿಂದ ಸಂಶೋಧನೆಯ ಕಡೆಗೆ ಮುಂದುವರಿದ ನಂತರವೂ ಪ್ರಮುಖ ಬದಲಾವಣೆಗಳಿಗೆ ಅನುವುಮಾಡಿಕೊಡುವ ನಮ್ಯ ವಿನ್ಯಾಸದ ಪರವಾಗಿ ಸ್ಟೇಕ್ ವಾದಿಸುತ್ತಾನೆ. ಆತನು ಸೂಚಿಸುವ ಏಕೈಕ ಪ್ರಾರಂಭಿಕ ವಿನ್ಯಾಸವು ಸಂಶೋಧನಾ ಪ್ರಶ್ನೆಗಳ ವಿನ್ಯಾಸಕ್ಕೆ ಕಾರಣವಾಗುವ ವಿಷಯಗಳು ಹಾಗೂ ವಿಷಯ ಪ್ರಶ್ನೆಗಳಿಗೆ ಸಂಬಂಧಿಸಿದುದಾಗಿದೆ. ಸ್ಟೇಕ್‌ನ ದೃಷ್ಟಿಕೋನದಲ್ಲಿ, ಸಂಶೋಧಕರು "ಗಮನವನ್ನು ಸಂಕೀರ್ಣತೆ ಹಾಗೂ ಸಾಂದರ್ಭಿಕತೆಯೆಡೆಗೆ ಸೆಳೆಯುವ ಸಲುವಾಗಿ ವಿಷಯಗಳನ್ನು ಪರಿಕಲ್ಪನಾತ್ಮಕ ಸಂರಚನೆಯಾಗಿ ಬಳಸುತ್ತಾರೆ (ಮತ್ತು)... ಏಕೆಂದರೆ, ವಿಷಯಗಳು ನಮ್ಮನ್ನು ವೀಕ್ಷಣೆ, ಲೇವಡಿ, ವಿಷಯದ ಸಮಸ್ಯೆಗಳು, ಸಂಘರ್ಷದ ಹೊರಹರಿವುಗಳು ಹಾಗೂ ಮಾನವ ಕಾಳಜಿಯ ಸಂಕೀರ್ಣ ಹಿನ್ನೆಲೆಗಳ ಕಡೆಗೆ ಸೆಳೆಯುತ್ತವೆ" (ಪುಟಗಳು. 16-17). ವಿಷಯ ಅಧ್ಯಯನಗಳ ಎರಡು ವಿಧಾನಗಳನ್ನು ಪ್ರಾರಂಭಿಸುವ ಬಗ್ಗೆ ಸ್ಟೇಕ್ ಮಹತ್ವಪೂರ್ಣ ಸಲಹೆಯನ್ನು ನೀಡುತ್ತಾನೆ: ಅಂತರ್ಗತ ವಿಷಯ ಅಧ್ಯಯನದಲ್ಲಿ ವಿಷಯವು ಪ್ರಧಾನ ಹಾಗೂ ಅತ್ಯಂತ ಪ್ರಮುಖ ಅಂಶವಾಗಿದೆ. ಕರಣಾರ್ಥಕ (instrumental) ವಿಷಯ ಅಧ್ಯಯನದಲ್ಲಿ ಚರ್ಚಾ ವಿಷಯವು (issue) ಪ್ರಧಾನವಾಗಿದ್ದು; ಪ್ರಧಾನವಾದ ಚರ್ಚಾ ವಿಷಯಗಳಿಂದ ಪ್ರಾರಂಭಿಸಿ, ಅದರೊಂದಿಗೆ ಮುಕ್ತಾಯಗೊಳಿಸುತ್ತೇವೆ" (ಸ್ಟೇಕ್, 1995, ಪು. 16).

ಸಂಶೋಧನಾ ಪ್ರಕ್ರಿಯೆಯಲ್ಲಿ ಯಾವ ನಿರ್ದಿಷ್ಟ ಅಂಶದಿಂದ ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣೆ ಪ್ರಾರಂಭವಾಗಬೇಕೆಂದು ಸ್ಟೇಕ್ (1995) ಸೂಚಿಸುವುದಿಲ್ಲವಾದರೂ, ಸಂಶೋಧನಾ ಪ್ರಶ್ನೆಗಳನ್ನು ಕುರಿತ ಆತನ ಸಲಹೆಯು, "ವೀಕ್ಷಣೆ, ಸಂದರ್ಶನಗಳು ಹಾಗೂ ದಾಖಲೆಯ ಪುನರ್ಪರಿಶೀಲನೆಯನ್ನು ಸಂರಚಿಸಲು ಸಹಾಯಮಾಡುವಂತಹ" ಎರಡು ಅಥವಾ ಮೂರು ತೀಕ್ಷ್ಣ ಅಥವಾ ವಿಕಸನಗೊಂಡ ಚರ್ಚಾವಿಷಯಗಳ ಪ್ರಶ್ನೆಗಳು (ಸಂಶೋಧನಾ ಪ್ರಶ್ನೆಗಳು) ವಿಷಯ ಅಧ್ಯಯನ ಸಂಶೋಧಕರಿಗೆ ಅವಶ್ಯವೆಂಬುದನ್ನು ಸೂಚಿಸುತ್ತದೆ (ಪು. 20). ಹತ್ತು ಅಥವಾ ಇಪ್ಪತ್ತು ಸ್ವತಂತ್ರ ಪ್ರಶ್ನೆಗಳನ್ನು ಸಂಶೋಧಕರ ಪ್ರಾರಂಭಿಕ "ವಿಷಯದೊಂದಿಗಿನ ಸಂಪರ್ಕ ಅಥವಾ ಅನುಭವ ಅಥವಾ ಸಂಗತವೆನಿಸುವ ಸಾಹಿತ್ಯಗಳ" ಮೂಲಕ ಎರಡು ಅಥವಾ ಮೂರು ಪ್ರಶ್ನೆಗಳಿಗೆ ಕಡಿತಗೊಳಿಸತಕ್ಕದ್ದು (ಪು. 20). ವಿಷಯ ಅಧ್ಯಯನ ವಿನ್ಯಾಸಕ್ಕೆ ಸಂಬಂಧಿಸಿದ ಸ್ಟೇಕ್‌ನ ಸಹಜ ನಮ್ಯತೆಯು, ಪಾರ್ಲೆಟ್ ಮತ್ತು ಹ್ಯಾಮಿಲ್ಟನ್ (1972) ಮೊದಲಿಗೆ ಪ್ರಸ್ತಾಪಿಸಿದ "ಪ್ರಗತಿಶೀಲ ಗಮನಹರಿಸುವಿಕೆ" ಎಂಬ ಕಲ್ಪನೆಯ ಅಳವಡಿಕೆಯಿಂದ ರೂಪುಗೊಂಡಿದೆ. ಈ ಕಲ್ಪನೆಯು, "ಅಧ್ಯಯನದ ಚಲನೆಯನ್ನು ಮುಂಚಿತವಾಗಿ ರೂಪಿಸಲಾಗುವುದಿಲ್ಲ" ಎಂಬ ಗ್ರಹಿಕೆಯನ್ನು ಆಧರಿಸಿದೆ (ಸ್ಟೇಕ್ 1998, ಪು. 22 ರಲ್ಲಿ ಉಲ್ಲೇಖಿಸಲಾಗಿದೆ). ಇದನ್ನು ಯಿನ್ ಖಂಡಿತಾ ವಿರೋಧಿಸುತ್ತಾನೆ. ಶೋಧನೆಯು ಪ್ರಾರಂಭಗೊಂಡು, ಸಮಸ್ಯೆಯ ಕ್ಷೇತ್ರಗಳು ಉತ್ತರೋತ್ತರವಾಗಿ

(progressively) ಸ್ಪಷ್ಟ ಹಾಘೂ ಪುನರ್‌ಪರಿಭಾಷಿತಗೊಳ್ಳುತ್ತಿದ್ದಂತೆಯೇ, ಶೋಧನೆಯು ಹಂತ ಹಂತವಾಗಿ ಪರಿವರ್ತನೆಗೊಳ್ಳುತ್ತದೆ ಎಂಬುದಾಗಿ ಪಾರ್ಲೆಟ್ ಮತ್ತು ಹ್ಯಾಮಿಲ್ಟನ್ ವ್ಯಾಖ್ಯಾನಿಸುತ್ತಾರೆ (ಸ್ಟೇಕ್ 1998, ಪು. 22ರಲ್ಲಿ ಉಲ್ಲೇಖಿಸಲಾಗಿದೆ). ಅನನುಭವಿ ಸಂಶೋಧಕರು ಸ್ಟೇಕ್‌ನ ನಮ್ಯ ಕಾರ್ಯವಿಧಾನದ ಬಗ್ಗೆ ತಿಳಿದಾಗ, ಈ ವಿಧಾನವು ಅನುಕೂಲಕರವಾಗಿರುವುದನ್ನು ಅವರು ಗಮನಿಸಬಹುದು ಏಕೆಂದರೆ, ಇದಕ್ಕೆ ಯಿನ್‌ನ ಕಾರ್ಯವಿಧಾನಕ್ಕೆ ಬೇಕಾಗುವಷ್ಟು ವಿನ್ಯಾಸ ಸಿದ್ಧತೆಯ ಅವಶ್ಯಕತೆಯಿರುವುದಿಲ್ಲ. ಆದರೆ, ಅವರು ವಿವರವಾದ ಮಾರ್ಗನಕ್ಷೆ ಹಾಗೂ ಕಾಲಮಿತಿಯಿಲ್ಲದೆ ತಮ್ಮ ಪ್ರಾರಂಭಿಕ ಸಂಶೋಧನಾ ಯಾತ್ರೆಯನ್ನೇನಾದರೂ ಪ್ರಾರಂಭಿಸಿದಲ್ಲಿ ಸಂಶೋಧನಾ ಪ್ರಕ್ರಿಯೆಯ ಯಾವುದಾದರೂ ಹಂತದಲ್ಲಿ ಕಳೆದುಹೋಗಬಹುದು ಅಥವಾ ಸಿಕ್ಕಿಹಾಕಿಕೊಳ್ಳಬಹುದು. ಅನುಭವಿ ಸಂಶೋಧಕರಿಗೂ ಸಹಾ ಅವರ ಸಂಶೋಧನೆಯನ್ನು ಕೈಗೊಳ್ಳುವುದಕ್ಕಿಂತ ಮುಂಚೆ ಅತ್ಯುತ್ತಮವಾಗಿ ಸಿದ್ಧಪಡಿಸಿದ ವಿನ್ಯಾಸದ ಅವಶ್ಯಕತೆಯಿರುತ್ತದೆ. ಗುಣಾತ್ಮಕ ಸಂಶೋಧನೆಯ ಒಬ್ಬ ಪ್ರತಿಪಾದಕನಾಗಿ ಸ್ಟೇಕ್‌ನ ಸಲಹೆಯು ಉದಯೋನ್ಮುಖ ಸಂಶೋಧಕರಲ್ಲಿ ಅನಿಶ್ಚಿತತೆ ಹಾಗೂ ದ್ವಂದ್ವಗಳಿಗೆ ಕಾರಣವಾಗುತ್ತದೆ. ಏಕೆಂದರೆ ಈ ಸಲಹೆಯಲ್ಲಿ ಸ್ಪಷ್ಟ ಮಾರ್ಗದರ್ಶನಗಳು ಇಲ್ಲವಾಗಿವೆ.

ಮೆರಿಯಮ್‌ಳ (1998) ಪುಸ್ತಕವು "ಅಧ್ಯಯನದ ವಿನ್ಯಾಸ ಹಾಗು ಮಾದರಿಯೊಂದರ ಆಯ್ಕೆ" ಎಂಬ ಅಧ್ಯಾಯವನ್ನು ಒಳಗೊಂಡಿದೆ. ಇದು ಸ್ಟೇಕ್‌ನ ಗುಣಾತ್ಮಕ ಸಂಶೋಧನಾ ವಿನ್ಯಾಸಕ್ಕಷ್ಟೇ ಅಲ್ಲದೆ ಯಿನ್‌ನ ಉತ್ತಮವಾಗಿ ಸಂರಚಿಸಿದ ವಿಷಯ ಅಧ್ಯಯನ ವಿನ್ಯಾಸಕ್ಕೂ ಪೂರಕವಾಗಿದೆ. ಶೋಧನೆಗೆ ಮಾರ್ಗದರ್ಶನ ಮಾಡುವಂತಹ ಸೈದ್ಧಾಂತಿಕ ಚೌಕಟ್ಟಿನ ರಚನೆಗಾಗಿ, ಸಂಬದ್ಧ ಸಾಹಿತ್ಯದ ವಿಮರ್ಶೆಗೆ ಸಂಬಂಧಿಸಿದ ಅತ್ಯಂತ ಮಾಹಿತಿಯುಕ್ತ ಹಾಗೂ ಸ್ಪಷ್ಟ ಮಾರ್ಗಸೂಚಿ ಹಾಗೂ ಸಲಹೆಯನ್ನು ಮರಿಯಮ್ ಪ್ರಸ್ತುತಪಡಿಸುತ್ತಾಳೆ. ಸ್ಟೇಕ್‌ನ ಅಥವ ಯಿನ್‌ನ ಪುಸ್ತಕದ ಭಾಗಗಳು ಇಂತಹ ಮಾರ್ಗಸೂಚಿಗಳು ಹಾಗೂ ಸಲಹೆಯನ್ನು ಒಳಗೊಂಡಿಲ್ಲ. ಅನನುಭವಿ ವಿಷಯ ಅಧ್ಯಯನ ಸಂಶೋಧಕರು ಅವರ ಸಂಶೋಧನಾ ಯೋಜನೆಗಳಿಗೆ ಅಥವಾ ಅಂತಿಮವಾಗಿ ಅವರ ಪ್ರೌಢಪ್ರಬಂಧಕ್ಕೆ ಸಾಹಿತ್ಯ ವಿಮರ್ಶೆಯನ್ನು ಬರೆಯಬೇಕಾಗುತ್ತದೆ. ಈ ವಿಮರ್ಶೆಯು ಅವರ ಸಂಶೋಧನೆಯನ್ನು ಪರಿಕಲ್ಪಿಸಲು ಹಾಗೂ ಅವರ ಇಡೀ ಸಂಶೋಧನಾ ಪ್ರಕ್ರಿಯೆಯನ್ನು ನಿರ್ಮಿಸಲು ಬೇಕಾದ ಸೈದ್ಧಾಂತಿಕ ಚೌಕಟ್ಟನ್ನು ರಚಿಸಲು ಅವರಿಗೆ ನೆರವಾಗುತ್ತದೆ. ಅವರ ಸೈದ್ಧಾಂತಿಕ ಚೌಕಟ್ಟನ್ನು ತಿಳಿಸುವಂತಹ ಸಾಹಿತ್ಯ ವಿಮರ್ಶೆಯನ್ನು ಸಮರ್ಪಕವಾಗಿ ಕೈಗೊಳ್ಳಲು ಅಗತ್ಯವಿರುವ ಸೂಚನೆಗಳನ್ನು ಕಲಿಯಲು ಅವರು ಮೆರಿಯಮ್‌ಳ ಪುಸ್ತಕವನ್ನು ಪರಾಮರ್ಶಿಸಬಹುದು.

ಗುಣಾತ್ಮಕ ಸಂಶೋಧನೆಯನ್ನು ವಿವರಣಾತ್ಮಕ ರೂಪದಲ್ಲಿ ವಿನ್ಯಾಸಗೊಳಿಸುವ ಪ್ರಕ್ರಿಯೆಯನ್ನು ಮೆರಿಯಮ್ (1998) ಹಂತ ಹಂತವಾಗಿ ಪ್ರಸ್ತುತಪಡಿಸುತ್ತಾಳೆ. ಅವಳ ಚರ್ಚೆಯು; ಸಾಹಿತ್ಯದ ವಿಮರ್ಶೆ, ಸೈದ್ಧಾಂತಿಕ ಚೌಕಟ್ಟೊಂದನ್ನು ರಚನೆ, ಸಂಶೋಧನಾ ಪ್ರಶ್ನೆಯೊಂದನ್ನು ಗುರುತಿಸುವುದು, ಸಂಶೋಧನಾ ಪ್ರಶ್ನೆಗಳನ್ನು ಸಿದ್ಧಪಡಿಸುವುದು ಹಾಗೂ ತೀಕ್ಷ್ಣಗೊಳಿಸುವುದು ಹಾಗೂ ಮಾದರಿಯ ಆಯ್ಕೆಯನ್ನು (ಉದ್ದೇಶಪೂರ್ವಕ ಮಾದರಿಯ ಆಯ್ಕೆ) ಒಳಗೊಂಡಿದೆ. ವಿಷಯ ಅಧ್ಯಯನದ ವಿನ್ಯಾಸದಲ್ಲಿ ಮೆರಿಯಮ್‌ಳ ಕಾರ್ಯವಿಧಾನವು ಯಿನ್ ಅಥವಾ ಸ್ಟೇಕ್‌ನ ವಿನ್ಯಾಸಕ್ಕೆ ಸಮೀಪವಿಲ್ಲ; ಇದು ಎರಡೂ ಕಾರ್ಯವಿಧಾನಗಳ ಸಂಯೋಜನೆಯಾಗಿದೆ. ಆಕೆಯು ಶಿಫಾರಸ್ಸು ಮಾಡುವ ವಿನ್ಯಾಸವು ಸ್ವಲ್ಪಮಟ್ಟಿಗೆ ನಮ್ಯವಾದುದು. ಆಕೆಯು ಗುಣಾತ್ಮಕ ಸಂಪ್ರದಾಯದಿಂದ ಬಂದವಳಾದ್ದರಿಂದ ಈ ಪ್ರಭಾವವು ಕಂಡುಬರುತ್ತದೆ. ಆದರೆ ಇದು ಸ್ಟೇಕ್‌ನ ವಿನ್ಯಾಸದಷ್ಟು ನಮ್ಯತೆಯಿಂದ ಕೂಡಿಲ್ಲ. ಉದಾಹರಣೆಗೆ, "ಸಾಮಾನ್ಯವಾಗಿ ದತ್ತಾಂಶ ಸಂಗ್ರಹಣೆಗಿಂತ ಮುಂಚೆ ಉದ್ದೇಶಿತ ಅಥವಾ ಉದ್ದೇಶಪೂರ್ವಕ ಮಾದರಿಯ ಆಯ್ಕೆಮಾಡಲಾಗುತ್ತದೆ. ಆದರೆ, ಸೈದ್ಧಾಂತಿಕ ಮಾದರಿ ಆಯ್ಕೆಯನ್ನು ದತ್ತಾಂಶ ಸಂಗ್ರಹಣೆಯೊAದಿಗೆ ಮಾಡಲಾಗುತ್ತದೆ" ಎಂದು ಮರಿಯಮ್ (1998) ಅಭಿಪ್ರಾಯಪಡುತ್ತಾಳೆ (ಪು. 66). ಈ ಸಲಹೆಯು ಯಿನ್‌ನ ದೃಷ್ಟಿಕೋನದಲ್ಲಿ ಸ್ವೀಕಾರಾರ್ಹವಲ್ಲ. ಏಕೆಂದರೆ, ವಿಷಯ ಅಧ್ಯಯನ ವಿನ್ಯಾಸವು ದತ್ತಾಂಶ ಸಂಗ್ರಹಣೆಗಿಂತ ಮುಂಚೆ ಆಗಬೇಕೆಂಬುದು ಆತನ ಅಭಿಪ್ರಾಯವಾಗಿದೆ. ಸ್ಟೇಕ್ ಗುಣಾತ್ಮಕ ವಿಷಯ ಅಧ್ಯಯನ ಸಂಶೋಧನೆಗೆ ಯಾವುದೇ ಮಾದರಿ ಆಯ್ಕೆಯ ತಂತ್ರಗಳು ಅಥವಾ ವಿಧಾನಗಳನ್ನು ತಿಳಿಸುವುದಿಲ್ಲ; ಬದಲಾಗಿ, ದತ್ತಾಂಶ ಸಂಗ್ರಹವನ್ನು ಪ್ರಾರಂಭಿಸುವ ನಿಖರವಾದ ಬಿಂದುವನ್ನು ನಿರ್ಧರಿಸುವುದನ್ನು ಆತನು ತಪ್ಪಿಸಿಕೊಳ್ಳುತ್ತಾನೆ. ಇದನ್ನು ಆತನು ಗುಣಾತ್ಮಕ ಸಂಶೋಧನೆಯ ಲಕ್ಷಣವೆಂದು ಪರಿಗಣಿಸುತ್ತಾನೆ.

## ದತ್ತಾಂಶ ಸಂಗ್ರಹಣೆ

ವಿಷಯ ಅಧ್ಯಯನ ಸಂಶೋಧಕರು ಅಧ್ಯಯನಕ್ಕೊಳಪಟ್ಟಿರುವ ವಿಷಯವನ್ನು ಅದರ ಸಂಕೀರ್ಣತೆ ಹಾಗೂ ಸಂಪೂರ್ಣತೆಗಳಲ್ಲಿ ಹಿಡಿದಿಡಲು ಅವರ ದತ್ತಾಂಶವನ್ನು ಹಲವು ಮೂಲಗಳಿಂದ ಪಡೆದುಕೊಳ್ಳಬೇಕಾಗುತ್ತದೆಂದು ಮೂವರು ವಿದ್ವಾಂಸರೂ ಅಭಿಪ್ರಾಯಪಡುತ್ತಾರೆ. ದತ್ತಾಂಶದ ಸಂಗ್ರಹಣೆಯ ಸಾಧನಗಳಿಗೆ ಸಂಬಂಧಿಸಿದಂತೆ ಸ್ವೀಕರಿಸಲ್ಪಡುವ ಜ್ಞಾನಶಾಸ್ತ್ರೀಯ ಸಂಪ್ರದಾಯವು, ಅವುಗಳ ಆಯ್ಕೆ ಹಾಗೂ ಇಡೀ ದತ್ತಾಂಶ ಸಂಗ್ರಹಣೆ ಪ್ರಕ್ರಿಯೆಯನ್ನು ಪ್ರಭಾವಿಸುತ್ತದೆ. ಯಿನ್ ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಸಾಕ್ಷ್ಯಾಧಾರ ಮೂಲಗಳ ಸಂಯೋಜನೆಯ ಪ್ರತಿಪಾದಕನಾಗುತ್ತಾನೆ. ಏಕೆಂದರೆ ಅವುಗಳನ್ನು ಆತನು ಅಷ್ಟೇ ಕರಣಾರ್ಥಕವಾದುವುಗಳೆಂದು

ಪರಿಗಣಿಸುತ್ತಾನೆ. ಆದರೆ, ಸ್ಟೇಕ್ ಮತ್ತು ಮೆರಿಯಮ್ ಗುಣಾತ್ಮಕ ದತ್ತಾಂಶದ ವಿಶೇಷ ಬಳಕೆಯನ್ನು ಸೂಚಿಸುತ್ತಾರೆ.

ವಿಷಯ ಅಧ್ಯಯನವನ್ನು ವಿನ್ಯಾಸಗೊಳಿಸುವಾಗ ವಿಷಯ ಅಧ್ಯಯನದ ಶೋಧಕನು ಅನುಸರಿಸಬೇಕಾದ ವಿಧಾನಗಳನ್ನು ವಿವರಿಸಿದ ನಂತರ, ವಾಸ್ತವಿಕ ದತ್ತಾಂಶ ಸಂಗ್ರಹಣೆಯ ವಿಧಾನಗಳನ್ನು ಚರ್ಚಿಸುವುದಕ್ಕಿಂತ ಮುಂಚಿನ ದತ್ತಾಂಶ ಸಂಗ್ರಹಣೆಯ ಪೂರ್ವಸಿದ್ಧತಾ ಹಂತಗಳು ಅಥವಾ ಯೋಜನಾ ಹಂತವನ್ನು ವಿವರಿಸುವ ಅಧ್ಯಾಯವೊಂದನ್ನು ಯಿನ್ ತನ್ನ ಪುಸ್ತಕದಲ್ಲಿ ಅಳವಡಿಸಿದ್ದಾನೆ. ಸಂಶೋಧಕರು ಅವರ ಸಂಶೋಧನಾ ಯಾತ್ರೆಯನ್ನು ಪ್ರಾರಂಭಿಸಿದಾಗ, ದತ್ತಾಂಶ ಸಂಗ್ರಹಣೆಗಿಂತ ಮುಂಚಿನ ಪ್ರಕ್ರಿಯೆ ಅಥವಾ ಸಂಶೋಧಕನಿಗೆ ಅವಶ್ಯವಿರುವ ವಿವರವಾದ ನಿರ್ದೇಶನಗಳನ್ನೊಳಗೊಂಡ ಮಾರ್ಗನಕ್ಷೆಯ ಮೇಲೆ ಆತನು ಎಷ್ಟು ಒತ್ತು ನೀಡುತ್ತಾನೆಂಬುದನ್ನು ಇದು ಮತ್ತೊಮ್ಮೆ ಸೂಚಿಸುತ್ತದೆ. ವಿಷಯ ಅಧ್ಯಯನದ ಯೋಜನೆಗೆ ಸಂಬಂಧಿಸಿದಂತೆ ಆತನು ನೀಡುವ ಒತ್ತು, ಆತನು ಮತ್ತೆ ಮತ್ತೆ ನೀಡುವ ಎಚ್ಚರಿಕೆಗೆ ಸಂಬಂಧಿಸಿದೆ: "ವಾಸ್ತವಿಕವಾಗಿ ನಿಮ್ಮ ಬುದ್ಧಿ, ಸ್ವಪ್ರತಿಷ್ಠೆ ಹಾಗೂ ಭಾವನೆಗಳಿಗೆ ಸಂಬಂಧಿಸಿದ ವಿಷಯ ಅಧ್ಯಯನದ ಬೇಡಿಕೆಗಳು ಇತರೆ ಯಾವುದೇ ಸಂಶೋಧನಾ ತಂತ್ರಕ್ಕಿಂತ ಅತ್ಯಂತ ಹೆಚ್ಚಾಗಿರುತ್ತವೆ. ಇದಕ್ಕೆ ಕಾರಣವೇನೆಂದರೆ, ದತ್ತಾಂಶ ಸಂಗ್ರಹಣೆಯ ವಿಧಾನಗಳನ್ನು ರೂಢಿಗತಗೊಳಿಸಿರುವುದಿಲ್ಲ" (ಯಿನ್, 2002, ಪು. 58). ದತ್ತಾಂಶ ಸಂಗ್ರಹಣೆಯ ಸಿದ್ಧತೆಯನ್ನು ವಿವರಿಸುವಾಗ; ವಿಷಯ ಅಧ್ಯಯನದ ಸಂಶೋಧಕನ ಅಪೇಕ್ಷಿತ ಕೌಶಲ್ಯಗಳು, ಒಂದು ನಿರ್ದಿಷ್ಟ ಅಧ್ಯಯನವೊಂದರ ತರಬೇತಿ, ಶೋಧನೆಯ ಶಿಷ್ಟಾಚಾರದ ಅಭಿವೃದ್ಧಿ, ವಿಷಯ ಅಧ್ಯಯನದ ನಾಮನಿರ್ದೇಶನಗಳ ಪರಿಶೀಲನೆ (ವಿಷಯದ ಆಯ್ಕೆಗೆ ಸಂಬಂಧಿಸಿದಂತೆ ಅಂತಿಮ ನಿರ್ಧಾರ ಕೈಗೊಳ್ಳುವುದು) ಹಾಗೂ ಪ್ರಾರಂಭಿಕ ಅಧ್ಯಯನಗಳಿಗೆ ಯಿನ್ ಪ್ರಾಮುಖ್ಯತೆ ನೀಡುತ್ತಾನೆ. ಈ ಸಿದ್ಧತೆಯಲ್ಲಿ ಆತನು ನಿರ್ದಿಷ್ಟವಾಗಿ ಪ್ರಾರಂಭಿಕ ವಿಷಯ ಅಧ್ಯಯನಕ್ಕೆ ಪ್ರಾಮುಖ್ಯತೆ ನೀಡುತ್ತಾನೆ. ಏಕೆಂದರೆ, "ದತ್ತಾಂಶದ ವಿಷಯ ಹಾಗೂ ಅನುಸರಿಸಬೇಕಾದ ವಿಧಾನಗಳಿಗೆ ಸಂಬಂಧಿಸಿದಂತೆ ನಿಮ್ಮ ದತ್ತಾಂಶ ಸಂಗ್ರಹಣೆಯ ಯೋಜನೆಗಳನ್ನು ಇದು ಸಂಸ್ಕರಿಸುತ್ತದೆ" ಎಂಬುದು ಯಿನ್‌ನ ಕಲ್ಪನೆಯಾಗಿದೆ (ಯಿನ್, 2002, ಪು. 79). ಪ್ರಮುಖ ಕಾರ್ಯವಾದ ಪ್ರಾರಂಭಿಕ ವಿಷಯ ಅಧ್ಯಯನಕ್ಕೆ ಒತ್ತು ನೀಡದಿರುವ ಸ್ಟೇಕ್ ಮತ್ತು ಮೆರಿಯಮ್ ಕಾರ್ಯವಿಧಾನಕ್ಕೆ ಯಿನ್‌ನ ಕಾರ್ಯವಿಧಾನವು ಪೂರಕವಾಗಿದೆ. ಇದಕ್ಕೆ ಬದಲಾಗಿ ಸ್ಟೇಕ್ ಮತ್ತು ಮೆರಿಯಮ್ ಪ್ರತಿಯೊಂದು ದತ್ತಾಂಶ ಸಂಗ್ರಹಣೆಯ ಸಾಧನದ ಚಾಲನೆಯ ಕಡೆಗೆ ಗಮನಹರಿಸುತ್ತಾರೆ.

ಯಿನ್‌ನ ದೃಷ್ಟಿಕೋನದಲ್ಲಿ ವಿಷಯ ಅಧ್ಯಯನ ಸಂಶೋಧನೆಯು ಸಾಕ್ಷಿಗಳ ವಿವಿಧ ಮೂಲಗಳ ಮೇಲೆ ನಿರ್ಭರವಾಗಿರತಕ್ಕದ್ದು. ಇದರ ಜೊತೆಗೆ ದತ್ತಾಂಶವು, ತ್ರಿಭುಜಾಕೃತಿ ಹೊಂದುವ ರೀತಿಯಲ್ಲಿ ಒಂದುಗೂಡಬೇಕು ಹಾಗೂ

ದತ್ತಾಂಶ ವಿಶ್ಲೇಷಣೆ ಮತ್ತು ಸಂಗ್ರಹಣೆಯು ಸೈದ್ಧಾಂತಿಕ ಪ್ರತಿಪಾದನೆಯ ಈ ಹಿಂದಿನ ಬೆಳವಣಿಗೆಗಳಿಂದ ಅನುಕೂಲವನ್ನು ಪಡೆದುಕೊಳ್ಳಬೇಕು. ಆರು ಸಾಕ್ಷ್ಯಾಧಾರ ಮೂಲಗಳನ್ನು ಸಂಶೋಧಕರು ಬಳಸಿಕೊಳ್ಳಬೇಕೆಂದು ಯಿನ್ ಸಲಹೆ ನೀಡುತ್ತಾನೆ. ಅವುಗಳೆಂದರೆ: ದಾಖಲೀಕರಣ, ಪುರಾತತ್ತ್ವ ದಾಖಲೆಗಳು, ಸಂದರ್ಶನಗಳು, ಪ್ರತ್ಯಕ್ಷ ವೀಕ್ಷಣೆಗಳು, ಪಾಲ್ಗೊಳ್ಳುವವರ ವೀಕ್ಷಣೆ ಹಾಗೂ ಭೌತಿಕ ಹಸ್ತಪ್ರತಿಗಳು. ಈ ಪ್ರತಿಯೊಂದಕ್ಕೂ ತನ್ನದೇ ಆದ ಸಾಮರ್ಥ್ಯ ಮತ್ತು ದೌರ್ಬಲ್ಯಗಳಿವೆ. ಇವುಗಳ ಬಳಕೆಯು ಸರ್ವೇಸಾಮಾನ್ಯವಾದುದು ಹಾಗೂ ಸಂಪೂರ್ಣವಾದ ಪಟ್ಟಿಯು ಇನ್ನೂ ವಿಸ್ತಾರವಾಗಿದೆಯೆಂದೂ ಸಹ ಆತನು ಸೂಚಿಸುತ್ತಾನೆ. ದತ್ತಾಂಶ ಸಂಗ್ರಹಣೆಯ ಸಾಧನಗಳ ಆತನ ವಿವರಣೆಯು, "ಪ್ರತಿಯೊಂದು ಸಾಕ್ಷ್ಯದ ಮೂಲವನ್ನು ಉಪಯೋಗಿಸುವುದಕ್ಕೆ ಸಂಬಂಧಿಸಿದ ಪ್ರಕ್ರಿಯೆಗಳನ್ನು" ಒಳಗೊಂಡಿದೆ (ಯಿನ್, 2002, ಪು. 96). ಅಂದರೆ, ಅವರ ತರಬೇತಿಯ ಒಂದು ಭಾಗವಾಗಿ ಸಂಶೋಧಕರು ತಿಳಿದುಕೊಳ್ಳಬೇಕಾದ ದತ್ತಾಂಶ ಸಂಗ್ರಹಣೆಯ ಸಾಧನಗಳ ವಿವರಗಳನ್ನು ಇದು ಒಳಗೊಂಡಿರುತ್ತದೆ. ಆ ನಂತರ ಈ ಎಲ್ಲಾ ಆರು ಸಾಧನಗಳು ಹಾಗೂ ಸಂಪೂರ್ಣ ದತ್ತಾಂಶ ಸಂಗ್ರಹಣೆಯ ಪ್ರಕ್ರಿಯೆಗೆ ಅನ್ವಯಿಸುವಂತಹ ಸಾಮಾನ್ಯ ತತ್ವಗಳನ್ನು ಆತನು ಚರ್ಚಿಸುತ್ತಾನೆ. ಈ ಸಾಮಾನ್ಯ ತತ್ವಗಳನ್ನು ಈ ಹಿಂದೆ ನಿರ್ಲಕ್ಷಿಸಲಾಗಿತ್ತು ಎಂದು ಹೇಳುವ ಆತನು, ಅವುಗಳನ್ನು ತನ್ನ ಪುಸ್ತಕದಲ್ಲಿ ಸಾಕಷ್ಟು ವಿವರವಾಗಿ ಚರ್ಚಿಸುತ್ತಾನೆ. ಈ ಸಾಮಾನ್ಯ ತತ್ವಗಳು ಈ ಮುಂದಿನವುಗಳ ಬಳಕೆಯನ್ನು ಒಳಗೊಂಡಿವೆ: ಅ) ಸಾಕ್ಷಿಯ ಬಹುಮೂಲಗಳು (ಇವು, ಎರಡು ಅಥವಾ ಹೆಚ್ಚು ಮೂಲಗಳ ಸಾಕ್ಷಿಗಳಾಗಿದ್ದಾಗ್ಯೂ, ತ್ರಿಭುಜಾಕೃತಿಯನ್ನು ರಚಿಸುವ ಸಲುವಾಗಿ ಇವೆಲ್ಲವೂ ವಾಸ್ತವಾಂಶಗಳು ಅಥವಾ ಫಲಿತಾಂಶಗಳ ಒಂದೇ ಗುಂಪಿನಲ್ಲಿ ಒಂದುಗೂಡುವಂತಿರಬೇಕು), ಬ) ಸದರಿ ವಿಷಯ ಅಧ್ಯಯನದ ದತ್ತಸಂಚಯ (database) (ಅನನುಭವಿ ಸಂಶೋಧಕರು ದತ್ತಾಂಶವನ್ನು ಹೇಗೆ ಉಪಯೋಗಿಸಿಕೊಳ್ಳಬೇಕು ಅಥವಾ ನಿರ್ವಹಿಸಬೇಕೆಂಬುದನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುವ ಅಂತಿಮ ವಿಷಯ ಅಧ್ಯಯನ ವರದಿಗಿಂತ ವಿಭಿನ್ನವಾದ ಸಾಕ್ಷಿಗಳ ಒಂದು ಔಪಚಾರಿಕ ಗುಂಪು) ಹಾಗೂ ಇ) ಸಾಕ್ಷಿಯ ಸರಣಿ (ಕೇಳಿದ ಪ್ರಶ್ನೆಗಳು, ಸಂಗ್ರಹಿಸಿದ ದತ್ತಾಂಶ, ಕೈಗೊಂಡ ನಿರ್ಧಾರಗಳ ನಡುವಿನ ವ್ಯಕ್ತ ಸಂಬAಧ. ಇದು "ಪ್ರಾರಂಭಿಕ ಸಂಶೋಧನಾ ಪ್ರಶ್ನೆಗಳಿಂದ ಮೊದಲ್ಗೊಂಡು, ಅಂತಿಮ ವಿಷಯ ಅಧ್ಯಯನದ ನಿರ್ಧಾರಗಳವರೆಗಿನ ಯಾವುದೇ ಸಾಕ್ಷಿಯ ವ್ಯುತ್ಪತ್ತಿಯನ್ನು" ಅನುಸರಿಸಲು ಸಹಾಯಮಾಡುತ್ತದೆ; ಯಿನ್, 2002, ಪು. 83). ಆತನು ವ್ಯಕ್ತಪಡಿಸುವಂತೆ ಈ "ಅತಿಕ್ರಮಿಸುವ ತತ್ವಗಳು" ದತ್ತಾಂಶ ಸಿಂಧುತ್ವಗೊಳಿಸುವಿಕೆಗೆ ಅನುಕೂಲಕರವಾಗಿರುತ್ತವ. ಪ್ರಕ್ರಿಯೆಯ ಪ್ರತಿಯೊಂದು ಹಂತದಲ್ಲಿ ಶೋಧನೆಯ ಗುಣಮಟ್ಟವನ್ನು ಗರಿಷ್ಠಗೊಳಿಸುವ ಯಿನ್‌ನ ಪ್ರಥಮ ಆದ್ಯತೆಯನ್ನು ಇದು ಒಳಗೊಂಡಿದೆ.

ಸ್ಟೇಕ್‌ನ ದೃಷ್ಟಿಕೋನದಲ್ಲಿ ದತ್ತಾಂಶ ಸಂಗ್ರಹಣೆಯು ಯಿನ್‌ನ ದೃಷ್ಟಿಕೋನಕ್ಕಿಂತ ಸಂಪೂರ್ಣವಾಗಿ ವಿಭಿನ್ನವಾದುದು. ಉದಾಹರಣೆಗೆ, ಶೋಧನೆಯ ಪ್ರತಿ ಹಂತವನ್ನು ನಿಖರವಾಗಿ ಯೋಜಿಸಬೇಕೆಂದು ಯಿನ್ ವಾದಿಸುತ್ತಾನೆ. ಇದಕ್ಕೆ ವಿರುದ್ಧವಾಗಿ, ಸ್ಟೇಕ್‌ನ ಪ್ರಕಾರ "ದತ್ತಾಂಶ ಸಂಗ್ರಹಣೆಯು ಯಾವುದೇ ನಿರ್ದಿಷ್ಟ ಕ್ಷಣದಿಂದ ಪ್ರಾರಂಭವಾಗುವುದಿಲ್ಲ" (ಪು. 49). ಏಕೆಂದರೆ ದತ್ತಾಂಶ ಸಂಗ್ರಹಣೆಯು ವಿಚಾರಣಾ ಪ್ರಕ್ರಿಯೆಯ ಕೆಲವು ಮೂಲಭೂತ ಬದಲಾವಣೆಗಳಿಗೆ ಕಾರಣವಾಗುತ್ತದೆ. ಯಿನ್‌ನ ದೃಷ್ಟಿಕೋನದಲ್ಲಿ ಮುಖ್ಯವಾಗಿ ಈ ಪ್ರಮುಖ ಮಾರ್ಪಾಡುಗಳನ್ನು ತಪ್ಪಿಸುವ ಸಲುವಾಗಿ ವಿಷಯ ಅಧ್ಯಯನ ಸಂಶೋಧಕರು ದತ್ತಾಂಶ ಸಂಗ್ರಹಣೆಗಿAತ ಮುಂಚೆ ಒಂದು ಪ್ರಜ್ಞಾಪೂರ್ವಕ ವಿನ್ಯಾಸ ಹಾಗೂ ಸಿದ್ಧತೆಯನ್ನು ಕೈಗೊಳ್ಳಬೇಕು. ಇದಲ್ಲದೆ, ವಿಷಯ ಅಧ್ಯಯನಕ್ಕೆ ಸ್ಟೇಕ್‌ನ ಸಕ್ರಮ ದತ್ತಾಂಶದ ವ್ಯಾಖ್ಯೆಯು ಯಿನ್‌ನ ವ್ಯಾಖ್ಯೆಗಿಂತ ಹೆಚ್ಚು ವಿಸ್ತಾರವಾದುದು. ಸ್ಟೇಕ್‌ನ ಪ್ರಕಾರ, "ಎಲ್ಲಾ ದತ್ತಾಂಶದ ಗಣನೀಯ ಭಾಗವು ಪ್ರಭಾವಾತ್ಮಕವಾದುದು. ಸಂಶೋಧಕನು ವಿಷಯವನ್ನು ಮೊದಲ ಸಲ ತಿಳಿದುಕೊಂಡಾಗ ದತ್ತಾಂಶದ ಬಗ್ಗೆ ಅನೌಪಚಾರಿಕವಾಗಿ ಅರಿತುಕೊಳ್ಳುತ್ತಾನೆ" (ಸ್ಟೇಕ್, 1995, ಪು. 49). ಸಂಶೋಧಕರು ಸಂಗ್ರಹಿಸಿ, ವಿಶ್ಲೇಷಣಾ ಉದ್ದೇಶಗಳಿಗಾಗಿ ಬಳಸಬಹುದಾದ ದತ್ತಾಂಶದ "ಗಣನೀಯ ಭಾಗ"ವಾಗಿ ಇದನ್ನು ಆತ ಪರಿಗಣಿಸುವುದಿಲ್ಲ. ನನ್ನ ದೃಷ್ಟಿಕೋನದಲ್ಲಿ ದತ್ತಾಂಶವನ್ನು ಅಭಿಪ್ರಾಯಾತ್ಮಕವಾದುದೆಂದು ಪರಿಗಣಿಸುವುದು ನನ್ನಂತಹ ಉದಯೋನ್ಮುಖ ಸಂಶೋಧಕರಿಗೆ ಗಂಭೀರ ಸಮಸ್ಯೆಗಳನ್ನು ತಂದೊಡ್ಡಬಹುದು. ಅಭಿಪ್ರಾಯವೆಂಬುದು ಸಮರ್ಥವಾಗಿ ವ್ಯಾಖ್ಯಾನಿಸಲು ಕಷ್ಟವೆನಿಸುವ ಒಂದು ಕಲ್ಪನೆಯಾಗಿದೆ. ಹೀಗಾಗಿ, ವಿಷಯದ ಕುರಿತಾದ ನಮ್ಮ ಅಭಿಪ್ರಾಯಗಳಿಂದ ದತ್ತಾಂಶವನ್ನು ಸಂಗ್ರಹಿಸುವುದು ನನಗೆ ಮತ್ತು ಇತರೆ ಪ್ರಾರಂಭಿಕ ಸಂಶೋಧಕರಿಗೆ ದಾರಿತಪ್ಪಿಸುವಂತಹುದಾಗಿರುತ್ತದೆ. ದತ್ತಾಂಶದ ಗುಂಪಿನಲ್ಲಿ, ನನ್ನ ಅಭಿಪ್ರಾಯವೇನು ಹಾಗೂ ಯಾವುದು ನನ್ನ ಅಭಿಪ್ರಾಯವಲ್ಲ ಎಂಬುದರ ನಡುವೆ ಸ್ಪಷ್ಟವಾದ ವ್ಯತ್ಯಾಸವನ್ನು ಗುರುತಿಸುವುದು ಬಹುತೇಕ ಅಸಾಧ್ಯವಾದುದು.

ಯಿನ್‌ನ ದೃಷ್ಟಿಕೋನದಷ್ಟು ಪ್ರಭಾವಶಾಲಿಯಲ್ಲದಿದ್ದರೂ, ಸ್ಟೇಕ್‌ನ ದೃಷ್ಟಿಕೋನವು, ಗುಣಾತ್ಮಕ ಸಂಶೋಧನೆಯನ್ನು ಕೈಗೊಳ್ಳಲು ಬೇಕಾದ ಕೌಶಲ್ಯಗಳ ಮಹತ್ವವನ್ನು ಎತ್ತಿ ತೋರಿಸುತ್ತದೆ. ಅವುಗಳೆಂದರೆ: "ಅರ್ಥಗರ್ಭಿತ ಗ್ರಹಿಕೆಯನ್ನು ಯಾವುದು ಮುನ್ನಡೆಸುತ್ತದೆ ಎಂಬುದನ್ನು ತಿಳಿದುಕೊಳ್ಳುವುದು, ದತ್ತಾಂಶದ ಸಮರ್ಪಕ ಮೂಲಗಳನ್ನು ಗುರುತಿಸುವುದು, ಪ್ರಜ್ಞಾಪೂರ್ವಕ ಅಥವ ಅಪ್ರಜ್ಞಾಪೂರ್ವಕವಾಗಿ ಅವುಗಳ ದೃಷ್ಟಿಯ ಸತ್ಯತೆ ಹಾಗೂ ಅವುಗಳ ವಿವರಣೆಗಳ ದೃಢತೆಯನ್ನು ಪರೀಕ್ಷಿಸುವುದು. ಇದಕ್ಕೆ ಸೂಕ್ಷ್ಮತೆ ಮತ್ತು ಸಂಶಯಮನೋವೃತ್ತಿಯು ಅವಶ್ಯ." (ಸ್ಟೇಕ್, 1995, ಪು. 50). ಈ ವಾದದ ನಂತರ, ಅನನುಭವಿ ಸಂಶೋಧಕರು ಈ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಹಾಯಮಾಡುವ ತಂತ್ರಗಳನ್ನು ಆತನು

ವಿವರಿಸುತ್ತಾನೆಂದು ನಾನು ನಿರೀಕ್ಷಿಸುತ್ತೇನೆ. ಇವುಗಳನ್ನು ವ್ಯಾಖ್ಯಾನಿಸುವುದು ಹಾಗೂ ವಿವರಿಸುವುದು ನನಗೆ ಕಷ್ಟಕರವೆಂದು ತೋರುತ್ತದೆ. ಉದಾಹರಣೆಗೆ, ವಿಷಯವನ್ನು ಸಮೀಪಿಸುವಾಗ ಅಥವಾ ದತ್ತಾಂಶವನ್ನು ಸಂಗ್ರಹಿಸುವಾಗ ಸೂಕ್ಷ್ಮತೆಯಿರಬೇಕು ಹಾಗೂ ಸಂಶಯ ಮನೋವೃತ್ತಿಯಿರಬೇಕೆಂದು ಯಾರಾದರೂ ಹೇಳಿದರೆ, ಸೂಕ್ಷ್ಮತೆ ಹಾಗೂ ಸಂಶಯ ಮನೋವೃತ್ತಿಯ ಪ್ರಮಾಣವನ್ನಾಗಲಿ ಅಥವಾ ಈ ಕೌಶಲ್ಯಗಳು ನನ್ನಲ್ಲಿಲ್ಲವಾದರೆ ಅವುಗಳನ್ನು ಹೇಗೆ ಅರ್ಜಿಸಿಕೊಳ್ಳಬೇಕೆಂಬುದಾಗಲಿ ನನಗೆ ತಿಳಿದಿರುವುದಿಲ್ಲ. ಹೀಗಾಗಿ ನಾನು ಅರ್ಥಮಾಡಿಕೊಂಡ ಪ್ರಕಾರ, ಸಂಶೋಧಕರ ತರಬೇತಿಗೆ ಸ಼ಂಧಿಸಿದಂತೆ ಯಿನ್‌ನ ದೃಷ್ಟಿಕೋನವು ಸ್ಟೇಕ್‌ನದಕ್ಕೆ ಪೂರಕವಾಗಿದೆ. ಅವಶ್ಯಕವಾದ ವಿಚಾರಣಾ ಕೌಶಲ್ಯಗಳನ್ನು ಗಳಿಸಲು ಯಿನ್‌ನ ದೃಷ್ಟಿಕೋನವು ಹೆಚ್ಚಿನ ಪ್ರಮಾಣದ ಸಮರ್ಥ ತಂತ್ರಗಳನ್ನು ಒದಗಿಸುತ್ತದೆ.

ಸ್ಟೇಕ್‌ನ ಶಿಷ್ಟಾಚಾರವು, ಯಿನ್‌ನ ವಿಷಯ ಅಧ್ಯಯನ ಶಿಷ್ಟಾಚಾರದಷ್ಟು ಸಂರಚನಾತ್ಮಕ ಹಾಗೂ ವಿವರಣಾತ್ಮಕವಾದುದಲ್ಲವಾದರೂ, ದತ್ತಾಂಶ ಸಂಗ್ರಹಣೆಯ ಯೋಜನೆಯೊಂದನ್ನು ಸಿದ್ಧಪಡಿಸುವ ಸಲಹೆ ನೀಡುತ್ತದೆ. ಈ ಯೋಜನೆಯು; "ವಿಷಯದ ವ್ಯಾಖ್ಯಾನ, ಸಂಶೋಧನಾ ಪ್ರಶ್ನೆಗಳ ಪಟ್ಟಿ, ಸಹಾಯಕರನ್ನು ಗುರುತಿಸುವಿಕೆ, ದತ್ತಾಂಶದ ಮೂಲಗಳು, ಸಮಯದ ಹಂಚಿಕೆ, ವೆಚ್ಚಗಳು, ಉದ್ದೇಶಿತ ವರದಿಯ ಸಲ್ಲಿಕೆಗಳನ್ನು" ಒಳಗೊಂಡಿರತಕ್ಕದ್ದು (ಸ್ಟೇಕ್, 1995, ಪು. 51). ಆದಾಗ್ಯೂ, "ಅನುಷ್ಠಾನಗೊಳಿಸುವ ಸಲುವಾಗಿ ಸಿದ್ಧಪಡಿಸಲಾದ ಈ ಯೋಜನೆಯನ್ನು ಸಂಶೋಧಕರು ಯಾವಾಗ ಸಿದ್ಧಪಡಿಸಬೇಕು?" ಎಂಬುದು ಈ ಉತ್ತಮ ಯೋಜನೆಯನ್ನು ಕುರಿತ ಪ್ರಶ್ನೆಯಾಗಿದೆ. ಏಕೆಂದರೆ ವಿಷಯಕ್ಕೆ ಸಂಬಂಧಿಸಿದಂತೆ ದತ್ತಾಂಶ ಸಂಗ್ರಹವನ್ನು ಪ್ರಾರಂಭಿಸಬೇಕಾದ ನಿರ್ದಿಷ್ಟ ಬಿಂದುವನ್ನು ಸ್ಟೇಕ್ ನಿರ್ಧರಿಸುವುದಿಲ್ಲ. ಇದಲ್ಲದೆ, ಈ ಯೋಜನಾ ಕ್ರಿಯೆಯನ್ನು ಸಿದ್ಧಪಡಿಸಿ ಅನುಷ್ಠಾನಗೊಳಿಸಲು ಅಗತ್ಯವಿರುವ ವಿವರವಾದ ಹಾಗೂ ರ‍್ಯಾಪ್ತ (sufficient) ಮಾರ್ಗದರ್ಶನವನ್ನು ಸ್ಟೇಕ್ ಒದಗಿಸುವುದಿಲ್ಲ. ದತ್ತಾಂಶ ಸಂಗ್ರಹಣೆಯ ಸಾಧನಗಳಿಗೆ ಸಂಬಂಧಿಸಿದಂತೆ ಗುಣಾತ್ಮಕ ವಿಷಯ ಅಧ್ಯಯನ ಸಂಶೋಧನೆಯಲ್ಲಿ ವೀಕ್ಷಣೆ, ಸಂದರ್ಶನ ಹಾಗೂ ದಾಖಲೆ ವಿಮರ್ಶೆಯನ್ನು ಬಳಸುವ ಸಲಹೆಯನ್ನು ಸ್ಟೇಕ್ ನೀಡುತ್ತಾನೆ. ಯಿನ್‌ನ ಪರಿಮಾಣಾತ್ಮಕ ದತ್ತಾಂಶ ಮೂಲಗಳ ಬಳಕೆಯನ್ನು ಆತ ವಿರೋಧಿಸುತ್ತಾನೆ. ಏಕೆಂದರೆ ಸ್ಟೇಕ್‌ನ ವಿಷಯ ಅಧ್ಯಯನವು ಸಂಪೂರ್ಣವಾಗಿ ಗುಣಾತ್ಮಕವಾದುದು.

ದತ್ತಾಂಶ ಸಂಗ್ರಹಣೆಯ ತನ್ನ ದೃಷ್ಟಿಕೋನದಲ್ಲಿ ಮೆರಿಯಮ್ (1998), ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಸಂಶೋಧನೆಯ ನಡುವಿನ ವ್ಯತ್ಯಾಸಗಳತ್ತ ಗಮನವನ್ನು ಮುಂದುವರೆಸುತ್ತಾಳೆ. ಏಕೆಂದರೆ, ಆಕೆಯ ಪುಸ್ತಕದಲ್ಲಿ ಗುಣಾತ್ಮಕ ಸಂಶೋಧನೆಯತ್ತ ಪ್ರಾಥಮಿಕ ಗಮನವನ್ನು

ಕೇಂದ್ರೀಕರಿಸಲಾಗಿದೆ. ಆದರೆ, ಸ್ಟೇಕ್‌ನ ಗುಣಾತ್ಮಕ ವಿಷಯ ಅಧ್ಯಯನ ಕಾರ್ಯವಿಧಾನಕ್ಕೆ ಹೋಲಿಸಿದರೆ ಮೆರಿಯಮ್‌ನ ವಿಧಾನವು ದತ್ತಾಂಶ ಸಂಗ್ರಹಣಾ ವಿಧಾನಗಳಿಗೆ ಹೆಚ್ಚು ವಿಸ್ತೃತವಾದ ಹಾಗೂ ಸಂಪೂರ್ಣವಾದ ಮಾರ್ಗದರ್ಶನವನ್ನು ಒದಗಿಸುತ್ತದೆ. ಉದಾಹರಣೆಗೆ, ಆಕೆಯ ಪುಸ್ತಕದ ಭಾಗಗಳ ಶೀರ್ಷಿಕೆಗಳು ಸೂಚಿಸುವಂತೆ; ('ಪರಿಣಾಮಕಾರಿ' ಸಂದರ್ಶನವನ್ನು ಕೈಗೊಳ್ಳುವುದು, 'ಎಚ್ಚರಿಕೆ'ಯ ವೀಕ್ಷಕನಾಗಿರುವುದು, ದಾಖಲೆಯಿಂದÀ ದತ್ತಾಂಶವನ್ನು 'ಹೆಕ್ಕಿ ತೆಗೆಯುವುದು') ಆಕೆಯು, ಸಲಹೆ ನೀಡುವ ಸಂಗ್ರಹಣಾ ಸಾಧನಗಳ ಪರಿಣಾಮಕಾರಿ ಬಳಕೆಗೆ ಸಂಶೋಧಕರಿಗೆ ಬೇಕಾದ ತಂತ್ರಗಳು ಹಾಗೂ ವಿಧಾನಗಳನ್ನು ಮೆರಿಯಮ್ ಪ್ರಸ್ತುತಪಡಿಸುತ್ತಾಳೆ. ಉದಾಹರಣೆಗೆ, ಸಂದರ್ಶನಗಳನ್ನು ದತ್ತಾಂಶ ಸಂಗ್ರಹಣೆಯ ಸಾಧನಗಳೆಂಬುದಾಗಿ ವಿವರಿಸುವ ಆಕೆ, ಸಂದರ್ಶನಗಳ ದತ್ತಾಂಶ ಸಂಗ್ರಹಣೆಯ ಈ ಕೆಳಕಂಡ ಅಂಶಗಳತ್ತ ಹೆಚ್ಚಿನ ಗಮನಹರಿಸುತ್ತಾಳಲ್ಲದೆ, ವಿಷಯ ಅಧ್ಯಯನವೊಂದರಲ್ಲಿ ಕೈಗೊಳ್ಳಲಾದ ಲಿಖಿತ ಸಂದರ್ಶನದ ಆಯ್ದ ಭಾಗಗಳನ್ನು ಒದಗಿಸುತ್ತಾಳೆ: ಅವೆಂದರೆ; ವಿಧಗಳು, ಉತ್ತಮ ಪ್ರಶ್ನೆಗಳನ್ನು ಕೇಳುವುದು, ಪರಿವರ್ಜಿಸತಕ್ಕ (avoid) ಪ್ರಶ್ನೆಗಳು, ಶೋಧನೆಗಳು, ಸಂದರ್ಶನಾ ಮಾರ್ಗಸೂಚಿ, ಸಂದರ್ಶನವನ್ನು ಪ್ರಾರಂಭಿಸುವುದು, ಸಂದರ್ಶಕ ಮತ್ತು ಸಂದರ್ಶನಾರ್ಥಿಯ ನಡುವಿನ ಪರಸ್ಪರ ಕ್ರಿಯೆ, ಸಂದರ್ಶನ ದತ್ತಾಂಶವನ್ನು ದಾಖಲಿಸುವುದು ಮತ್ತು ಮೌಲ್ಯೀಕರಿಸುವುದು. ದತ್ತಾಂಶ ಸಂಗ್ರಹಣೆಯ ಪ್ರಕ್ರಿಯೆಯಲ್ಲಿ ಸಂದರ್ಶನದ ಈ ಅಂಶಗಳ ಮೇಲೆ ಮೆರಿಯಮ್ ಗಮನ ಹರಿಸುವಷ್ಟು ಸ್ಟೇಕ್ (1995) ಆಗಲಿ ಯಿನ್ (2002) ಆಗಲಿ ಗಮನಹರಿಸುವುದಿಲ್ಲ. ಹೀಗಾಗಿ ಗುಣಾತ್ಮಕ ವಿಷಯ ಅಧ್ಯಯನವನ್ನು ಕೈಗೊಳ್ಳಲು ಆಲೋಚಿಸುತ್ತಿರುವ ಅನನುಭವಿ ಸಂಶೋಧಕರಿಗೆ ದತ್ತಾಂಶ ಸಂಗ್ರಹಣೆಯ ಮಾರ್ಗಸೂಚಿಗಳಿಗೆ ಸಂಬಂಧಿಸಿದಂತೆ ಮೆರಿಯಮ್‌ಳ ವಿಧಾನವು ಹೆಚ್ಚು ಉಪಯುಕ್ತ ಹಾಗೂ ಅನುಕೂಲಕರವಾಗಿದೆ.

ವಿಷಯ ಅಧ್ಯಯನದ ಈ ಮೂರು ವಿಭಿನ್ನ ದೃಷ್ಟಿಕೋನಗಳನ್ನು ಪರಿಶೀಲಿಸಿದ ನಂತರ ಒಬ್ಬ ಉದಯೋನ್ಮುಖ ಸಂಶೋಧಕನಾಗಿ ನನಗನಿಸುವುದೇನೆಂದರೆ: ವಿಷಯ ಅಧ್ಯಯನದಲ್ಲಿ ದತ್ತಾಂಶ ಸಂಗ್ರಹಣೆಗೆ ಸಂಬಂಧಿಸಿದ ಯಿನ್ ಮತ್ತು ಮೆರಿಯಮ್‌ರ ವಿಧಾನಗಳು ಪರಸ್ಪರ ಪೂರಕವಾಗಿವೆ. ಯಿನ್‌ನ ಮೂರು ತತ್ವಗಳು ಹಾಗೂ ಮೆರಿಯಮ್‌ಳ ದತ್ತಾಂಶ ಸಂಗ್ರಹಣೆಯ ವಿಧಾನಗಳ ವ್ಯಾಪಕ ಮಾರ್ಗದರ್ಶನದ ಸಂಯೋಜನೆಯು ನನಗೆ ಅತ್ಯಂತ ಹೆಚ್ಚು ಅನುಕೂಲಕರ. ನನ್ನ ಆಲೋಚನೆಯನ್ನು ಮತ್ತಷ್ಟು ವಿವರಿಸುವುದಾದರೆ; ನಾನು ಗುಣಾತ್ಮಕ ಸಂಶೋಧನೆಯ ಪರಿಕಲ್ಪನೆಯೊಂದನ್ನು ಕೈಗೊಳ್ಳುತ್ತಿರುವುದರಿಂದ, ದತ್ತಾಂಶ ಸಂಗ್ರಹಣೆಯ ವಿಧಾನಗಳಿಗೆ ಸಂಬಂಧಿಸಿದಂತೆ ಮೆರಿಯಮ್‌ಳ ವಿಧಾನಕ್ಕೆ ಬದ್ಧನಾಗಿರಲು ಯೋಚಿಸುತ್ತಿದ್ದೇನೆ. ಆದರೆ, ನಾನು ಯಿನ್‌ನ ವಿಧಾನವನ್ನು ಬಳಸಿಕೊಳ್ಳುವುದು ಅವಶ್ಯ. ಏಕೆಂದರೆ, ನನ್ನ ಸಂಶೋಧನೆಯ ಪ್ರಾರಂಭದಲ್ಲಿ ನಾನು ಹೊಂದಿದ್ದ

ಪ್ರಶ್ನೆಗಳು ಮತ್ತು ಸೈದ್ಧಾಂತಿಕ ಪ್ರತಿಪಾದನೆಗಳು ಹಾಗೂ ದತ್ತಾಂಶ ಸಂಗ್ರಹಣೆಯ ನಡುವಿನ ಸಂಬಂಧದ ಮೇಲೆ ನಿರಂತರವಾಗಿ ಗಮನಹರಿಸಲು ಆತನ ತತ್ವಗಳು ನನಗೆ ಸಹಾಯಮಾಡುತ್ತವೆ. ಇದು ದತ್ತಾಂಶದ ಸಿಂಧುತ್ವ ಹಾಗೂ ಶೋಧನೆಯ ಸಮಗ್ರ ಸಾಮಂಜಸ್ಯವನ್ನು ಉದ್ದೀಪಿಸುತ್ತದೆ. ಅಂತಿಮವಾಗಿ, ವಿಷಯ ಅಧ್ಯಯನದ ಮೂರು ದೃಷ್ಟಿಕೋನಗಳ ವಿಶ್ಲೇಷಣೆಯಿಂದ ಈ ಕೆಳಕಂಡ ನಿರ್ಧಾರಕ್ಕೆ ಬರಬಹುದು: ಗುಣಾತ್ಮಕ ಸಂಶೋಧಕರಾಗಿ ಮೆರಿಯಮ್ ಮತ್ತು ಸ್ಟೇಕ್, ತಮ್ಮ ಜ್ಞಾನಶಾಸ್ತ್ರೀಯ ಬದ್ಧತೆಗಳಿಗೆ ಅತಿ ಹೆಚ್ಚಿನ ಒತ್ತನ್ನು ನೀಡುತ್ತಾರೆ. ಹೀಗಾಗಿ ವಿಷಯ ಅಧ್ಯಯನಕ್ಕೆ ದತ್ತಾಂಶ ಸಂಗ್ರಹಿಸಲು ಪರಿಮಾಣಾತ್ಮಕ ದತ್ತಾಂಶ ಮೂಲಗಳು ಸಕ್ರಮವಾದುವೆಂದು ಅವರು ಪರಿಗಣಿಸುವುದಿಲ್ಲ. ಆದ್ದರಿಂದ ದತ್ತಾಂಶ ಸಂಗ್ರಹಣೆಗೆ ಸಂಬಂಧಿಸಿದ ಅವರ ತ್ರಿಭುಜೀಕರಣದ ವ್ಯಾಖ್ಯೆಯು ನಿರ್ಬಂಧಿತವಾದುದೆನಿಸುತ್ತದೆ. ಇದಕ್ಕೆ ಪ್ರತಿಯಾಗಿ ಯಿನ್‌ನ ದೃಷ್ಟಿಕೋನದಲ್ಲಿ, ಶೋಧನೆಯೊಂದರಲ್ಲಿನ ಗುಣಮಟ್ಟವು ಸಂಶೋಧನಾ ಪ್ರಕ್ರಿಯೆಯ ಪ್ರತಿಯೊಂದು ಹಂತದಲ್ಲಿ ಸಿಂಧುತ್ವ ಹಾಗೂ ವಿಶ್ವಾಸಾರ್ಹತೆಯನ್ನು ಹೆಚ್ಚಿಸುವುದನ್ನು ಅವಲಂಬಿಸಿರುತ್ತದೆ. ಆದ್ದರಿಂದ, ಮುಖ್ಯವಾಗಿ ಸಿಂಧುತ್ವವನ್ನು ಪ್ರಭಾವಿಸುವ ತ್ರಿಭುಜೀಕರಣದ ಉದ್ದೇಶಕ್ಕಾಗಿ ಆರು ಸಾಧನಗಳನ್ನು ಯಿನ್ ಸೂಚಿಸುತ್ತಾನೆ.

## ದತ್ತಾಂಶದ ವಿಶ್ಲೇಷಣೆ

ಈ ಮೂರು ವಿಧಾನಶಾಸ್ತ್ರಜ್ಞರ ಜ್ಞಾನಶಾಸ್ತ್ರೀಯ ನಿಲುವುಗಳು ಸಹಾ ವಿಷಯ ಅಧ್ಯಯನದಲ್ಲಿ ದತ್ತಾಂಶ ವಿಶ್ಲೇಷಣೆಯ ಅವರ ಕಾರ್ಯವಿಧಾನಗಳ ಮೇಲೆ ಪರಿಣಾಮ ಬೀರಿದಂತೆ ಕಾಣುತ್ತದೆ. ಅಂದರೆ, ವಿಷಯ ಅಧ್ಯಯನ ದತ್ತಾಂಶದ ವಿಶ್ಲೇಷಣೆಗೆ ಸಂಬಂಧಿಸಿದಂತೆ ವಾಸ್ತವತೆ ಹಾಗೂ ಜ್ಞಾನವನ್ನು ಪರಿಕಲ್ಪಿಸುವಲ್ಲಿ ಅವರು ಹೊಂದಿರುವ ವ್ಯತ್ಯಾಸಗಳು, ಅವರು ವಿಭಿನ್ನ ಸಲಹೆಗಳನ್ನು ನೀಡುತ್ತಿರುವುದಕ್ಕೆ ಕಾರಣಗಳಾಗಿವೆ. ವಿಶ್ಲೇಷಣೆಗೆ ಸಂಬಂಧಿಸಿದ ಯಿನ್‌ನ (2002) ವ್ಯಾಖ್ಯಾನವು; "ಪರಿಶೀಲನೆ, ವರ್ಗೀಕರಣ, ಪಟ್ಟೀಕರಣ, ಪರೀಕ್ಷಣೆ (testing) ಅಥವಾ ಅಧ್ಯಯನವೊಂದರ ಪ್ರಾರಂಭಿಕ ಪ್ರತಿಪಾದನೆಗಳನ್ನು ಚರ್ಚಿಸುವ ಸಲುವಾಗಿ ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಸಾಕ್ಷಿಗಳೆರಡನ್ನೂ ಪುನರ್‌ಸಂಯೋಜಿಸುವುದನ್ನು ಒಳಗೊಂಡಿದೆ" (ಪು. 109). ಇದು ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಸಂಶೋಧನೆಯ ವಿಂಗಡಣೆಯನ್ನು ಕುರಿತ ಆತನ ವಿರೋಧಕ್ಕನುಸಾರವಾಗಿದೆ. ಸಂಶೋಧಕರು, ವಿಷಯ ಅಧ್ಯಯನವನ್ನು ಕುರಿತ ಆತನ ನಿರೂಪಣೆಯಲ್ಲಿನ ಗುಣಾತ್ಮಕ ಹಾಗೂ ಪರಿಮಾಣಾತ್ಮಕ ಸಾಕ್ಷಿಗಳೆರಡನ್ನೂ ವಿಶ್ಲೇಷಿಸುವುದರಿಂದ ಎರಡೂ ವಿಧದ ಸಾಕ್ಷಿಗಳನ್ನು ವಿಶ್ಲೇಷಿಸುವ ಸಾಮರ್ಥ್ಯವನ್ನು ಅವರು ಹೊಂದಿರಬೇಕಾಗುತ್ತದೆ. ಇದರ ಜೊತೆಗೆ, ಯಿನ್‌ನ ದೃಷ್ಟಿಕೋನದಲ್ಲಿ ಸಂಶೋಧಕರಿಗೆ ಅತ್ಯುತ್ತಮವಾಗಿ ಸಂರಚಿಸಲ್ಪಟ್ಟಿರುವ ವಿಶ್ಲೇಷಣಾತ್ಮಕ

ಮಾರ್ಗಸೂಚಿಗಳು ಹಾಗೂ ತತ್ವಗಳ ಅಗತ್ಯವಿದೆ. ಏಕೆಂದರೆ, ಒಂದು ಸಂಶೋಧನಾ ವಿಧಾನವಾಗಿ ವಿಷಯ ಅಧ್ಯಯನವಿನ್ನೂ ವಿಕಸನಗೊಳ್ಳುತ್ತಿತ್ತು; ಉತ್ತಮವಾಗಿ ವ್ಯಾಖ್ಯಾನಿಸಲ್ಪಟ್ಟ ಕಾರ್ಯನೀತಿಗಳು ಹಾಗೂ ನೈಪುಣ್ಯಗಳ ಕೊರತೆಯಿದೆ. ಇದನ್ನು ಸರಿಪಡಿಸಲು ಯಿನ್ ಸಾಮಾನ್ಯ ಹಾಗೂ ನಿರ್ದಿಷ್ಟ ಕಾರ್ಯನೀತಿಗಳೆರಡನ್ನೂ ವಿವರಿಸುತ್ತಾನೆ. ಸಂಶೋಧಕರು ಪ್ರತಿಯೊಂದು ನಿರ್ದಿಷ್ಟ ಕಾರ್ಯತಂತ್ರದ ಪ್ರತಿಯೊಂದಕ್ಕೂ ಸಾಮಾನ್ಯ ಕಾರ್ಯತಂತ್ರವನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಉತ್ತಮ ಗುಣಮಟ್ಟದ ವಿಶ್ಲೇಷಣೆಗಾಗಿ ಸಂಶೋಧಕರು ನಾಲ್ಕು ಅತಿಮುಖ್ಯ ತತ್ವಗಳಿಗೆ ಬದ್ಧರಾಗಬೇಕೆಂದು ಯಿನ್ ಸೂಚಿಸುತ್ತಾನೆ. ದತ್ತಾಂಶ ವಿಶ್ಲೇಷಣೆಗೆ ಸಾಕಷ್ಟು ಮಾರ್ಗದರ್ಶನಗಳನ್ನೊಳಗೊಂಡ ಈ ಕಾರ್ಯವಿಧಾನವು ಅನನುಭವಿ ಸಂಶೋಧಕರಿಗೆ ಸಾಕಷ್ಟು ಉಪಯುಕ್ತವೆನಿಸುತ್ತದೆ. ಯಾವುದೇ ನೈಪುಣ್ಯತೆ ಮತ್ತು ಅನುಭವವಿಲ್ಲದೆ ಸಂಶೋಧನಾ ಕ್ಷೇತ್ರಕ್ಕೆ ಪ್ರವೇಶಿಸುವ ಈ ಸಂಶೋಧಕರಿಗೆ ಸಾಕಷ್ಟು ಮಾರ್ಗದರ್ಶನದ ಅವಶ್ಯಕತೆಯಿರುತ್ತದೆ.

ಯಿನ್, ವಿಷಯ ಅಧ್ಯಯನದಲ್ಲಿ ವಿಶ್ಲೇಷಣಾ ವಿಧಾನಗಳನ್ನು ಚರ್ಚಿಸುವಾಗ; ಗುಣಮಟ್ಟದ ಸಂಶೋಧನೆಗೆ ಆತನ ಮಾನದಂಡಗಳಾದ ಸಿಂಧುತ್ವ ಹಾಗೂ ವಿಶ್ವಾಸಾರ್ಹತೆಗಳ ಬಗ್ಗೆ ಪ್ರಸ್ತಾಪಿಸುತ್ತಾನೆ. ಆತನು ಸೂಚಿಸುವ ಎಲ್ಲಾ ತಂತ್ರಗಳು ಹಾಗೂ ಕಾರ್ಯನೀತಿಗಳು ವಿಶ್ಲೇಷಣೆಯ ಸಂದರ್ಭದಲ್ಲಿ ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯನ್ನು ಹೆಚ್ಚಿಸಲು ಅನುಕೂಲಕರವಾಗಿರುತ್ತವೆ. ಯಿನ್‌ನ ದೃಷ್ಟಿಕೋನದಿಂದ ಸಂಶೋಧಕರು ಈ ಮಾನದಂಡಗಳನ್ನು; ಉತ್ತಮವಾಗಿ ವ್ಯಾಖ್ಯಾನಿಸಿದ ಹಾಗೂ ಸಂರಚಿಸಿದ ವಿಶ್ಲೇಷಣಾ ವಿಧಾನಗಳ ಮೂಲಕ ನಿಯಂತ್ರಿಸುತ್ತಾರೆ. ಆತನು ವಿವರಿಸುವ ವಿಶ್ಲೇಷಣಾ ಹಂತಗಳು ಹಾಗೂ ತಂತ್ರಗಳ ಮೂಲಕ ವಿಷಯಕ್ಕೆ ಸಂಬಂಧಿಸಿದಂತೆ ವಸ್ತುನಿಷ್ಠ ಅಥವಾ ಅತ್ಯಂತ ಸಮೀಪ ಸತ್ಯವನ್ನು ತಲುಪಲು ಸಂಶೋಧಕರಿಗೆ ಸಾಧ್ಯವಾಗುತ್ತದೆಂದು ಯಿನ್ ಭಾವಿಸಿದಂತೆ ಕಂಡುಬರುತ್ತದೆ. ಈ ಭಾವನೆಯು ಆತನು ಅನುಸರಿಸುವ ತಾತ್ವಿಕ ಸಂಪ್ರದಾಯವನ್ನು ಪ್ರತಿಬಿಂಬಿಸುತ್ತದೆ.

ಸ್ಟೇಕ್, ವಿಶ್ಲೇಷಣೆಯನ್ನು; “ಪ್ರಥಮ ಅಭಿಪ್ರಾಯಗಳು ಹಾಗೂ ಅಂತಿಮ ವಿಷಯ ಸಂಗ್ರಹಣೆಗಳನ್ನು ಅರ್ಥಗರ್ಭಿತಗೊಳಿಸುವಿಕೆ” ಎಂಬುದಾಗಿ ವ್ಯಾಖ್ಯಾನಿಸುತ್ತಾನೆ (ಪು. 71). ಸ್ಟೇಕ್‌ನ ದೃಷ್ಟಿಕೋನದಲ್ಲಿ; “ನಮ್ಮ ಅಭಿಪ್ರಾಯಗಳು, ನಮ್ಮ ವೀಕ್ಷಣೆಗಳ ಪ್ರತ್ಯೇಕ ನಿರ್ವಹಣೆಯೇ ವಿಶ್ಲೇಷಣೆ.” (ಪು. 71). ದತ್ತಾಂಶ ವಿಶ್ಲೇಷಣೆಯ ಬಗೆಗಿನ ಆತನ ವಾದಗಳು, ದತ್ತಾಂಶ ಸಂಗ್ರಹಣೆಯ ವಾದಗಳಿಗನುಸಾರವಾಗಿವೆ. ಸಂಶೋಧಕರ ಅಭಿಪ್ರಾಯಗಳನ್ನು ದತ್ತಾಂಶದ ಪ್ರಮುಖ ಮೂಲಗಳೆಂಬುದರಿಂದ ಅನುಕೂಲ ಪಡೆದುಕೊಳ್ಳುವ ಈತನು, ‘ವಿಶ್ಲೇಷಣೆಯಾಗಿ’ ಅವನ್ನು ಅರ್ಥಗರ್ಭಿತಗೊಳಿಸುತ್ತಾನೆ.” (ಸಂಶೋಧಕರು) ತಮ್ಮ ಮುಂಚಿನ ಜ್ಞಾನದ ನಿಟ್ಟಿನಲ್ಲಿ; ವ್ಯವಸ್ಥಿತವಾಗಿ ವಿಶ್ಲೇಷಿಸಲು ಹಾಗೂ

ತಪ್ಪುಗ್ರಹಿಕೆಯನ್ನು ಕಡಿಮೆಮಾಡಲು ಸಹಾಯಕವೆನಿಸುವ" ವಿಶ್ಲೇಷಣಾ ಶಿಷ್ಟಾಚಾರಗಳನ್ನು ಬಳಸುವುದನ್ನು ಆತನು ಗುರುತಿಸುತ್ತಾನಾದರೂ, ಶಿಷ್ಟಾಚಾರದ ಮಾರ್ಗದರ್ಶನಕ್ಕಿಂತ ಹೆಚ್ಚಾಗಿ ಅಂತಃಪ್ರಜ್ಞೆ ಹಾಗೂ ಅಭಿಪ್ರಾಯಕ್ಕೆ ಆದ್ಯತೆ ನೀಡುತ್ತಾನೆ (ಸ್ಟೇಕ್, 1995, ಪು. 72). ಗುಣಾತ್ಮಕ ಸಂಪ್ರದಾಯದ ಒಂದು ಸಾಮಾನ್ಯ ಪ್ರವೃತ್ತಿಯಾಗಿ ಸಂಶೋಧಕರು ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣಾ ಪ್ರಕ್ರಿಯೆಗಳನ್ನು ಏಕಕಾಲದಲ್ಲಿ ಕೈಗೊಳ್ಳಬೇಕೆಂದು ಆತನು ಸಲಹೆ ನೀಡುತ್ತಾನೆ. ಆದ್ದರಿಂದ ವಿಶ್ಲೇಷಣೆಯನ್ನು ಪ್ರಾರಂಭಿಸಲು ಸಂಶೋಧನಾ ಪ್ರಕ್ರಿಯೆಯಲ್ಲಿ ಯಾವುದೇ ನಿಖರ ಬಿಂದುವಿಲ್ಲ. ಏಕೆಂದರೆ ದತ್ತಾಂಶ ಸಂಗ್ರಹಣೆಯನ್ನು ಪ್ರಾರಂಭಿಸಲು ಯಾವುದೇ ನಿಖರವಾದ ಬಿಂದುವಿಲ್ಲ. ಇದಲ್ಲದೆ ವಿಷಯ ಅಧ್ಯಯನದ ದತ್ತಾಂಶ ವಿಶ್ಲೇಷಣೆಯಲ್ಲಿ ಗುಣಾತ್ಮಕ ಹಾಗೂ ಪರಿಮಾಣಾತ್ಮಕ ದೃಷ್ಟಿಕೋನಗಳ ನಡುವಿನ ವ್ಯತ್ಯಾಸವನ್ನು ಹೆಚ್ಚು ಸುಸ್ಪಷ್ಟಗೊಳಿಸುವುದನ್ನು ಸ್ಟೇಕ್ ಮುಂದುವರೆಸುತ್ತಾನೆ. ವಿಶ್ಲೇಷಣಾ ಹಂತವು ಈ ಎರಡು ದೃಷ್ಟಿಕೋನಗಳು ಪರಸ್ಪರ ಅತಿ ಹೆಚ್ಚು ವಿಮುಖವಾಗಿರುವ ಬಿಂದುವೆಂಬುದು ಆತನ ಅಭಿಪ್ರಾಯ. ತೀವ್ರವಾದ ಸಂಶೋಧನೆಯ ಸಲುವಾಗಿ ಇವೆರಡರ ನಡುವಿನ ತಾತ್ವಿಕ ಭಿನ್ನತೆಗಳಿಗೆ ಬದಲಾಗಿ ಅವುಗಳ ನಡುವಿನ ಸಾಮ್ಯತೆಗಳತ್ತ ಗಮನಹರಿಸುವ ಯಿನ್‌ನ ವಾದವನ್ನು ಈ ಅಭಿಪ್ರಾಯವು ವಿರೋಧಿಸುತ್ತದೆ.

ದತ್ತಾಂಶವನ್ನು ವಿಶ್ಲೇಷಿಸಲು ಸ್ಟೇಕ್, 'ವರ್ಗೀಯ ಸಮಗ್ರತೆ' ಹಾಗೂ 'ಪ್ರತ್ಯಕ್ಷ ವಿವರಣೆ' ಎಂಬ ಎರಡು ಕಾರ್ಯತಂತ್ರಗಳನ್ನು ವಿವರಿಸುತ್ತಾನೆ: ವಿಷಯ ಅಧ್ಯಯನ ದತ್ತಾಂಶವನ್ನು ವಿಶ್ಲೇಷಿಸುವ ಎರಡು ಸಾಮಾನ್ಯ ಕಾರ್ಯತಂತ್ರಗಳಾಗಿ ಆತನು ಇವುಗಳನ್ನು ಮಂಡಿಸುತ್ತಾನೆ. ಅನಂತರ, ಈ ಎರಡು ಸಾಮಾನ್ಯ ಕಾರ್ಯತಂತ್ರಗಳ ಅವಶ್ಯಕ ಭಾಗವಾದ ಮಾದರಿಗಳನ್ನು ಹುಡುಕುವ ನಿರ್ದಿಷ್ಟ ತಂತ್ರಗಳನ್ನು ಆತನು ಪ್ರಸ್ತುತಪಡಿಸುತ್ತಾನೆ. ಆದರೆ ಈ ಕಾರ್ಯತಂತ್ರಗಳು ವಿಷಯ ಅಧ್ಯಯನ ವಿಶ್ಲೇಷಣೆಯನ್ನು ಕೈಗೊಳ್ಳುವ ಸೂಕ್ತ ಮಾರ್ಗವಲ್ಲವೆಂಬುದನ್ನು ಆತನು ಗುರುತಿಸುತ್ತಾನೆ. "ಅನುಭವ ಮತ್ತು ಪರ್ಯಾಲೋಚನೆಯ ಮೂಲಕ ಪ್ರತಿಯೊಬ್ಬ ಸಂಶೋಧಕನಿ/ಳಿಗೆ ಸರಿಹೊಂದುವಂತಹ ವಿಶ್ಲೇಷಣೆಯ ಮಾದರಿಯನ್ನು ಕಂಡುಕೊಳ್ಳುವ ಅಗತ್ಯವಿರುತ್ತದೆ" ಎಂದು ಆತನು ಅಭಿಪ್ರಾಯಪಡುತ್ತಾನೆ (ಸ್ಟೇಕ್, 1995, ಪು. 77). ಹೆಚ್ಚಿನ ಅನುಭವವಿಲ್ಲದಿರುವುದರಿಂದ ಅನುಭವಿ ತಜ್ಞ ಸಂಶೋಧಕರಿಗಿಂತ ಅನನುಭವಿ ಸಂಶೋಧಕರಿಗೆ ಹೆಚ್ಚಿನ ಮಾರ್ಗದರ್ಶನದ ಅವಶ್ಯಕತೆಯಿರುತ್ತದೆ. ಕೇವಲ ತಮ್ಮ ಅಭಿಪ್ರಾಯಗಳು ಹಾಗೂ ಅಂತಃಪ್ರಜ್ಞೆಗಳ ಮೇಲೆ ಅವರು ನಿರ್ಭರರವಾಗಿರಬೇಕೆಂದು ಸೂಚಿಸುವುದು ಅವರಿಗೆ ಅಗತ್ಯವಿರುವ ಮಾರ್ಗದರ್ಶನವೆನಿಸಿಕೊಳ್ಳುವುದಿಲ್ಲ. ಸ್ಟೇಕ್‌ನ ಅಭಿಪ್ರಾಯಕ್ಕೆ ಬದಲಾಗಿ, ವಿಷಯ ಅಧ್ಯಯನ ವಿಧಾನಗಳನ್ನು ಕೈಗೊಳ್ಳಲು ತನ್ನ ಪುಸ್ತಕದಲ್ಲಿ ನೀಡಿರುವ ವಿಧಾನ ಹಾಗೂ ವಿನ್ಯಾಸವು ಅತ್ಯುತ್ತಮವಾದುದು ಅಥವಾ ಅತ್ಯುತ್ತಮವಾದ ಮಾರ್ಗಕ್ಕೆ ಅತ್ಯಂತ

ಸಮೀಪವಾದುದೆಂದು ಯಿನ್ ತಿಳಿದುಕೊಂಡಂತೆ ಕಾಣುತ್ತದೆ. ಇದು ಆತನ ಪುಸ್ತಕದ ಶೀರ್ಷಿಕೆಯಲ್ಲಿಯೂ ಸಹ ವ್ಯಕ್ತವಾಗುತ್ತದೆ.

ಮೆರಿಯಮ್‌ಳ ಪುಸ್ತಕದ ಉದ್ದೇಶವು ಆಕೆಯು ಅದನ್ನು ಸಂಘಟಿಸುವ ರೀತಿಯ ಮೇಲೆ ಪರಿಣಾಮ ಬೀರಿದೆ. ಆಕೆಯ ಮೂರು ಮಾದರಿ ಶೋಧನೆಗಳಲ್ಲಿ ವಿಷಯ ಅಧ್ಯಯನದ ವಿಶೇಷ ಲಕ್ಷಣಗಳನ್ನು ವಿವರಿಸುವುದಕ್ಕೆ ಮುಂಚೆ ಮೆರಿಯಮ್, ಗುಣಾತ್ಮಕ ಸಂಶೋಧನೆಯಲ್ಲಿನ ವಿಶ್ಲೇಷಣಾ ತಂತ್ರಗಳು ಹಾಗೂ ದತ್ತಾಂಶ ನಿರ್ವಹಣೆಯನ್ನು ಚರ್ಚಿಸುತ್ತಾಳೆ. ವಿಷಯ ಅಧ್ಯಯನಕ್ಕಾಗಿ ಆಕೆಯ ಗುಣಾತ್ಮಕ ದತ್ತಾಂಶ ವಿಶ್ಲೇಷಣೆಯ ಮಾದರಿಯು ಸ್ಟೇಕ್‌ನದಷ್ಟೆ ಅಲ್ಲದೆ ಯಿನ್‌ನ ವಿಷಯ ಅಧ್ಯಯನ ನಿರೂಪಣೆಗೆ ಪೂರಕವಾಗಿರುವಂತೆ ಕಂಡುಬರುತ್ತದೆ. ಮೊದಲಿಗೆ ಆಕೆಯು ದತ್ತಾಂಶ ವಿಶ್ಲೇಷಣೆಯನ್ನು; "ದತ್ತಾಂಶದಿಂದ ಅರ್ಥವನ್ನು ಹೊರಹೊಮ್ಮಿಸುವ ಪ್ರಕ್ರಿಯೆ ಎಂತಲೂ, ದತ್ತಾಂಶದ ಅರ್ಥೈಸುವಿಕೆಯು; ಜನರು ಹೇಳಿರುವುದನ್ನು ಹಾಗೂ ಸಂಶೋಧಕರು ಏನನ್ನು ನೋಡಿದರು ಮತ್ತು ಓದಿದರು ಎಂಬುದನ್ನು ಕ್ರೋಢೀಕರಿಸುವ, ಸಂಕ್ಷಿಪ್ತಗೊಳಿಸುವ ಹಾಗೂ ವ್ಯಾಖ್ಯಾನಿಸುವ ಪ್ರಕ್ರಿಯೆಯನ್ನು ಒಳಗೊಂಡಿರುತ್ತದೆ. ಇದು ಅರ್ಥವನ್ನು ಹೊಮ್ಮಿಸುವ ರೀತಿಯೂ ಹೌದು" ಎಂಬುದಾಗಿಯೂ ಆಕೆ ವ್ಯಾಖ್ಯಾನಿಸುತ್ತಾಳೆ (ಮೆರಿಯಮ್, 1998, ಪು. 178). ವಿಶ್ಲೇಷಣೆಯಲ್ಲಿ ಸಂಶೋಧಕರ ಅಭಿಪ್ರಾಯ ಮತ್ತು ಅಂತಃಪ್ರಜ್ಞೆಗೆ ಒತ್ತು ನೀಡುವ ಸ್ಟೇಕ್‌ನ ವ್ಯಾಖ್ಯಾನಕ್ಕೆ ಹೋಲಿಸಿದಾಗ; ಮೆರಿಯಮ್‌ಳ ಗುಣಾತ್ಮಕ ದತ್ತಾಂಶ ವಿಶ್ಲೇಷಣೆಯ ವ್ಯಾಖ್ಯಾನವು, ಸಂಶೋಧನೆಯಲ್ಲಿ ರಚನಾತ್ಮಕ ಜ್ಞಾನಶಾಸ್ತ್ರದ ಸಂಪೂರ್ಣ ಅನ್ವಯಿಸುವಿಕೆಯಂತೆ ಕಂಡುಬರುತ್ತದೆಯಲ್ಲದೆ, ಸಂಶೋಧಕರಿಗೆ ಹೆಚ್ಚಿನ ಪ್ರಮಾಣದ ಸದೃಢ ಮಾರ್ಗದರ್ಶನವನ್ನು ನೀಡುತ್ತದೆ. ಕ್ರೋಢೀಕರಣ, ಕಡಿತಗೊಳಿಸುವಿಕೆ ಹಾಗೂ ಅರ್ಥವಿವರಣೆಗಳು ವಿಶ್ಲೇಷಣಾ ಪ್ರಕ್ರಿಯೆಯಲ್ಲಿ ಅಭಿಪ್ರಾಯ ಮತ್ತು ಅಂತಃಪ್ರಜ್ಞೆಗಳಿಗಿಂತ ಹೆಚ್ಚಿನ ಸ್ಪಷ್ಟವಾದ ಹಾಗೂ ಬಲವಾದ ರಚನವಾದದ ಅನ್ವಯಿಸುವಿಕೆಗೆ ಸಹಾಯಮಾಡುತ್ತವೆ.

ಎರಡನೆಯದಾಗಿ, ಏಕಕಾಲದಲ್ಲಿನ ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣೆಯ ಬಗ್ಗೆ ಮೆರಿಯಮ್ ವಿವರಿಸುತ್ತಾಳೆ. ಈ ಕ್ರಿಯೆಯನ್ನು ಸ್ಟೇಕ್ ಸಂಕ್ಷಿಪ್ತವಾಗಿ ತಿಳಿಸುತ್ತಾನೆ. ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣೆಯನ್ನು ಏಕಕಾಲದಲ್ಲಿ ಏಕೆ ಮತ್ತು ಹೇಗೆ ಕೈಗೊಳ್ಳಬಹುದು/ಕೈಗೊಳ್ಳತಕ್ಕದ್ದು ಎಂಬುದನ್ನು ವಿವರಿಸಲು ಮೆರಿಯಮ್ ಅಧ್ಯಾಯವೊಂದರ ಒಂದು ಭಾಗವೊಂದನ್ನು ಮೀಸಲಿರಿಸಿದ್ದಾಳೆ. ಇದು, ಗುಣಾತ್ಮಕ ಸಂಶೋಧನಾ ವಿನ್ಯಾಸದ ಸರ್ವೋತ್ಕೃಷ್ಟ ಗುಣಲಕ್ಷಣವಾಗಿದ್ದು; ಇದರಿಂದಾಗಿ, ಸಂಶೋಧನೆ ಆಧಾರಿತ ಧನಾತ್ಮಕ ಜ್ಞಾನಶಾಸ್ತ್ರಕ್ಕಿಂತ ಇದು ವಿಭಿನ್ನವಾಗಿ ನಿಲ್ಲುತ್ತದೆಂದು ಮೆರಿಯಮ್ ಅಭಿಪ್ರಾಯಪಡುತ್ತಾಳೆ. ಇದರ ಜೊತೆಗೆ ಆಕೆಯೊಂದು ಎಚ್ಚರಿಕೆಯನ್ನು ನೀಡುತ್ತಾಳೆ: ಪುನರಾವರ್ತಕ ಹಾಗೂ ಕ್ರಿಯಾತ್ಮಕ ದತ್ತಾಂಶ

ಸಂಗ್ರಹಣೆ ಮತ್ತು ವಿಶ್ಲೇಷಣೆಯೆಡೆಗಿನ ಬೆಂಬಲವು; "ಎಲ್ಲಾ ದತ್ತಾಂಶವನ್ನು ಸಂಗ್ರಹಿಸಿದ ನಂತರದಲ್ಲಿ ವಿಶ್ಲೇಷಣೆಯು ಸಮಾಪ್ತಿಯಾದಂತೆ ಎಂಬ ಅರ್ಥವನ್ನು ಸೂಚಿಸುವುದಿಲ್ಲ. ಇದಕ್ಕೆ ವಿರುದ್ಧವಾದ ಅರ್ಥವನ್ನು ಇದು ನೀಡುತ್ತದೆ. ಅಧ್ಯಯನವು ಮುಂದುವರಿಯುತ್ತಿದ್ದು, ದತ್ತಾಂಶವೆಲ್ಲವೂ ಸಂಗ್ರಹವಾಗುತ್ತಿದ್ದಂತೆ, ವಿಶ್ಲೇಷಣೆಯು ಹೆಚ್ಚು ಗಾಢವಾಗುತ್ತದೆ" (ಮೆರಿಯಮ್, 1998, ಪು. 155). ಗುಣಾತ್ಮಕ ವಿಧಾನಶಾಸ್ತ್ರಜ್ಞರು ಉದಯೋನ್ಮುಖ ವಿನ್ಯಾಸವನ್ನು ಪ್ರತಿಪಾದಿಸುತ್ತಾರೆಂಬುದರ ಹಿನ್ನೆಲೆಯಲ್ಲಿ ಈ ಏಕಕಾಲಿಕ ಮತ್ತು ಪರಸ್ಪರ ಪ್ರಕ್ರಿಯೆಯು ಚಾಲನೆಗೊಂಡಿದೆ. ದತ್ತಾಂಶದ ಪ್ರಾಥಮಿಕ ವಿಶ್ಲೇಷಣೆಯು, ಸಂಶೋಧನೆಯ ಮುಂದಿನ ಹಂತಗಳಲ್ಲಿನ ಬದಲಾವಣೆಗಳಿಗೆ ಕಾರಣವಾಗಬಹುದು.

ಮೂರನೆಯದಾಗಿ, ದತ್ತಾಂಶವನ್ನು ನಿರ್ವಹಿಸುವ ತಂತ್ರಗಳಿಗೆ ಒಂದು ಭಾಗವನ್ನು ಮೆರಿಯಮ್ ಮೀಸಲಿರಿಸಿದ್ದಾಳೆ. ಇದು ಯಿನ್ ಮತ್ತು ಸ್ಟೇಕ್‌ನ ವಿಧಾನಗಳಿಗೆ ಪೂರಕವಾಗಿದೆ. ವಿಶೇಷವಾಗಿ ದತ್ತಾಂಶವನ್ನು ವಿಶ್ಲೇಷಿಸಲು ಕಂಪ್ಯೂಟರ್ ಸಾಫ್ಟ್‌ವೇರ್ ಪ್ರೋಗ್ರಾಮ್‌ನ್ನು ಬಳಸಲಿಚ್ಛಿಸುವ ಅನನುಭವಿ ಸಂಶೋಧಕರಿಗೆ ಅಧ್ಯಾಯದ ಈ ಭಾಗವು ಹೆಚ್ಚು ಉಪಯುಕ್ತವೆನಿಸಿದೆ. ಅವರಿಗೆ ದತ್ತಾಂಶ ನಿರ್ವಹಣೆಗೆ ಕಂಪ್ಯೂಟರ್ ಸಾಫ್ಟ್‌ವೇರ್ ಪ್ರೋಗ್ರಾಮ್‌ನ್ನು ಬಳಸಲು ಬೇಕಾದ ಜ್ಞಾನವನ್ನು ಈ ಭಾಗವು ನೀಡುತ್ತದೆ. ಕೊನೆಯದಾಗಿ, ಗುಣಾತ್ಮಕ ಸಂಶೋಧನೆಯಲ್ಲಿನ ವರ್ಗೀಕೃತ ಸಮಗ್ರತೆ ಮತ್ತು ಮಾದರಿಗಳನ್ನು ಕುರಿತ ಹುಡುಕಾಟಕ್ಕೆ ಸಂಬಂಧಿಸಿದ ಸ್ಟೇಕ್‌ನ ಚರ್ಚೆಗೆ, ಮೆರಿಯಮ್‌ಳ ವಿಶ್ಲೇಷಣಾ ಹಂತಗಳ ವಿಧಾನವು ಪೂರಕವಾಗಿದೆ. ಗುಣಾತ್ಮಕ ದತ್ತಾಂಶದ ವಿಶ್ಲೇಷಣೆಗೆ ಹೆಚ್ಚು ಸಮಗ್ರವಾದ ವಿವರಣೆ ಮತ್ತು ಹೆಚ್ಚು ಸಂಪೂರ್ಣವಾದ ಮಾರ್ಗದರ್ಶನವನ್ನು ಮೆರಿಯಮ್ ಒದಗಿಸುತ್ತಾಳೆ. ಸ್ಟೇಕ್‌ನ ಅಭಿಪ್ರಾಯದಂತೆ ಇದು "ಪ್ರತಿಪಾದನೆ ಮತ್ತು ಯೋಜನೆಗಳ" ಸಂಯೋಜನೆಯಾಗಿದೆ. ಏಕೆಂದರೆ, ತಾವು ವಿಶ್ಲೇಷಿಸುತ್ತಿರುವ ದತ್ತಾಂಶದಿಂದ ಸಿದ್ಧಾಂತವನ್ನು ಅಭಿವೃದ್ಧಿಪಡಿಸಲು ಸಂಶೋಧಕರಿಗೆ ಅಗತ್ಯವಿರುವ ಪ್ರತಿಯೊಂದು ಗುಣಾತ್ಮಕ ವಿಶ್ಲೇಷಣಾ ತಂತ್ರ ಹಾಗೂ ವಿಧಾನಗಳನ್ನು ಅನುಷ್ಠಾನಗೊಳಿಸಲು ಮೆರಿಯಮ್ ಹಂತ-ಹಂತವಾಗಿ ನಿರ್ದೇಶನಗಳನ್ನು ಪ್ರಸ್ತುತಪಡಿಸುತ್ತಾಳೆ.

## ದತ್ತಾಂಶದ ಮೌಲ್ಯೀಕರಣ

ಶೋಧನೆಯಲ್ಲಿನ ಸಿಂಧುತ್ವ ಮತ್ತು ವಿಶ್ವಾಸರ್ಹತೆಯ ಕಲ್ಪನೆಗಳೊಂದಿಗೆ ಸಂಬAಧವನ್ನು ಹೊಂದಿರುವ ಮೌಲ್ಯೀಕರಣದ ಕುರಿತು ಈ ಮೂರು ವಿಧಾನಶಾಸ್ತ್ರಜ್ಞರು ವಿಭಿನ್ನವಾದ ದೃಷ್ಟಿಕೋನಗಳನ್ನು ಹೊಂದಿದ್ದಾರೆ. ವಿಶೇಷವಾಗಿ, ಮೆರಿಯಮ್ ಮತ್ತು ಸ್ಟೇಕ್‌ರ ದೃಷ್ಟಿಕೋನವು ಯಿನ್‌ನ ದೃಷ್ಟಿಕೋನಕ್ಕಿಂತ ವಿಭಿನ್ನವಾಗಿ ಎದ್ದುಕಾಣುವಂತಿದೆ. ಇದು ಅವರ ತಾತ್ವಿಕ ದೃಷ್ಟಿಕೋನಗಳಲ್ಲಿನ ವ್ಯತ್ಯಾಸಗಳ ಅಭಿವ್ಯಕ್ತಿಯಾಗಿದೆ. ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯನ್ನು ನಿಯಂತ್ರಿಸುವ ಮೂಲಕ ಧನಾತ್ಮಕ ಸಂಶೋಧನಾ

ಸಂಪ್ರದಾಯವು; ಅಧ್ಯಯನಕ್ಕೊಳಪಟ್ಟಿರುವ ವಿಷಯಕ್ಕೆ ಸಂಬಂಧಿಸಿದ ನಿಖರ ಹಾಗೂ ಅಂದಾಜಿತ ಜ್ಞಾನವನ್ನು ಗ್ರಹಿಸುವ ಅಥವಾ ಪತ್ತೆಹಚ್ಚುವ ಉದ್ದೇಶವನ್ನು ಹೊಂದಿದೆ. ಜ್ಞಾನವು ಅನೇಕ ವಿವರಣೆಗಳನ್ನು ಒಳಗೊಂಡಿದೆಯೆಂಬ ಕಲ್ಪನೆಯನ್ನು ರಚನಾವಾದವು ಮಂಡಿಸುತ್ತದೆ. ಏಕೆಂದರೆ, ಜ್ಞಾನವು "ತಿಳಿಯುವವನು" ಮತ್ತು "ತಿಳಿದಿರುವವನು" ಇವರುಗಳ ನಡುವಿನ ಸೃಜನೆಯಾಗಿದೆ. ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯ ಪರಿಕಲ್ಪನೆಗಳು ಮೊದಲಿಗೆ ಧನಾತ್ಮಕ ಸಂಪ್ರದಾಯದಲ್ಲಿ ಉಗಮವಾಗಿರುವುದರಿಂದ ಅವುಗಳನ್ನು ಗುಣಾತ್ಮಕ ಶೋಧನೆಗೆ ಅನ್ವಯಿಸುವುದು ಬಹುತೇಕ ಅಸಾಧ್ಯವಾದುದೆಂಬ ವಾಸ್ತವವು ಮೆರಿಯಮ್ ಮತ್ತು ಸ್ಟೇಕ್‌ರಿಗೆ ತಿಳಿದಿದೆ. ರಚನಾತ್ಮಕ ಜ್ಞಾನಶಾಸ್ತ್ರಾಧಾರಿತವಾದ ಗುಣಾತ್ಮಕ ಸಂಶೋಧನೆಯಲ್ಲಿ ಮೂಲಭೂತವಾದ ಈ ಧನಾತ್ಮಕ ಕಲ್ಪನೆಗಳನ್ನು ಅಳವಡಿಸಿಕೊಳ್ಳುವುದು ಸಾಧ್ಯವಿಲ್ಲ. ಹೀಗಾಗಿ ಸಿಂಧುತ್ವ ಮತ್ತು ವಿಶ್ವಾಸಾರ್ಹತೆಗೆ ಸಂಬಂಧಿಸಿದ ಮೆರಿಯಮ್ ಮತ್ತು ಸ್ಟೇಕ್‌ನ ಪರಿಕಲ್ಪನೆಯು ಯಿನ್‌ನ ಪರಿಕಲ್ಪನೆಗಿಂತ ಗಮನಾರ್ಹವಾಗಿ ವಿಭಿನ್ನವಾಗಿದೆ.

ಯಿನ್ (ಆಂತರಿಕ ಮತ್ತು ಬಾಹ್ಯ ರಚನೆ) ವಿಷಯ ಅಧ್ಯಯನದ ವಿನ್ಯಾಸದ ವಿಧಾನಗಳನ್ನು ವಿವರಿಸುವುದಕ್ಕೆ ಮುಂಚೆ, ಆತನ ಪಠ್ಯಪುಸ್ತಕದ ಪ್ರಾರಂಭದಲ್ಲಿಯೆ ಸಿಂಧುತ್ವ ಮತ್ತು ವಿಶ್ವಾಸಾರ್ಹತೆಗಳನ್ನು ಅವುಗಳ ಸಾಂಪ್ರದಾಯಿಕ ಅರ್ಥದಲ್ಲಿ ವಿವರಿಸುತ್ತಾನೆ. ಸಂಶೋಧನೆಯ ಗುಣಮಟ್ಟವನ್ನು ನಿರ್ಧರಿಸುವ ಮಾನದಂಡಗಳಾಗಿ ಇವುಗಳನ್ನು ಆತನು ಪರಿಗಣಿಸುತ್ತಾನೆ. "ಎಲ್ಲಾ ಸಾಮಾಜಿಕ ವಿಜ್ಞಾನದ ವಿಧಾನಗಳಿಗೆ ಸಾಮಾನ್ಯವಾಗಿರುವ" ಈ ಮಾನದಂಡಗಳ ಅತ್ಯುನ್ನತ ಮಹತ್ವವನ್ನು ಪಠ್ಯಪುಸ್ತಕದ ಉಳಿದ ಭಾಗದಲ್ಲಿ ಪದೇ ಪದೇ ಆತನು ನೆನಪಿಸುತ್ತಾನೆ (ಯಿನ್, 2002, ಪು. 34). ಇಡೀ ಶೋಧನೆಯನ್ನು ವಿನ್ಯಾಸಗೊಳಿಸುವಾಗ ಹಾಗೂ ಅನುಷ್ಠಾನಗೊಳಿಸುವಾಗ ವಿಷಯ ಅಧ್ಯಯನ ಸಂಶೋಧಕರು ಈ ಮಾನದಂಡಗಳನ್ನು ಪರಿಗಣಿಸಲಾಗಿದೆಯೆಂಬುದನ್ನು ಖಾತರಿಪಡಿಸಿಕೊಳ್ಳಬೇಕೆಂದು ಆತನು ಸಲಹೆ ನೀಡುತ್ತಾನೆ. ಸಂಶೋಧನಾ ಗುಣಮಟ್ಟ ಹಾಗೂ ತೀವ್ರತೆಯು ಈ ಮಾನದಂಡಗಳ ಸಾಧನೆಯನ್ನು ಸೂಚಿಸುವುದರಿಂದ, "ಈ ಪುಸ್ತಕದ ಒಂದು ಪ್ರಮುಖ ಅವಿಷ್ಕಾರವೆಂದರೆ ವಿಷಯ ಅಧ್ಯಯನವನ್ನು ಕೈಗೊಳ್ಳುವಾಗ ಈ ನಾಲ್ಕು ಪರೀಕ್ಷೆಗಳನ್ನು ಕೈಗೊಳ್ಳಲು ಅನೇಕ ತಂತ್ರಗಳನ್ನು ಗುರುತಿಸುವುದಾಗಿದೆ" (ಯಿನ್, 2002, ಪು. 34). ಯಿನ್‌ನ ಪ್ರಕಾರ, ವಿಷಯ ಅಧ್ಯಯನದ ಸಂಶೋಧಕರು; ರಚನಾ ಸಿಂಧುತ್ವ (ಪುರಾವೆಯ ಬಹುಮೂಲಗಳ ತ್ರಿಭುಜೀಕರಣ, ಪುರಾವೆಯ ಸರಣಿಗಳು ಹಾಗೂ ಸದಸ್ಯ ತಪಾಸಣೆಯ ಮೂಲಕ), ಆಂತರಿಕ ಸಿಂಧುತ್ವ (ಮಾದರಿ ಹೊಂದಾಣಿಕೆಯಂತಹ ಸ್ಥಾಪಿತ ವಿಶ್ಲೇಷಣಾತ್ಮಕ ತಂತ್ರಗಳ ಮೂಲಕ), ಬಾಹ್ಯ ಸಿಂಧುತ್ವ (ವಿಶ್ಲೇಷಣಾತ್ಮಕ ಸಾಮಾನ್ಯೀಕರಣದ ಮೂಲಕ) ಹಾಗೂ ವಿಶ್ವಾಸಾರ್ಹತೆಗಳನ್ನು (ವಿಷಯ ಅಧ್ಯಯನದ ಶಿಷ್ಟಾಚಾರಗಳು ಮತ್ತು

ದತ್ತಸಂಚಯಗಳ ಮೂಲಕ) ಖಾತರಿಪಡಿಸಿಕೊಳ್ಳುವ ಅಗತ್ಯವಿದೆ. ಈ ಪರೀಕ್ಷೆಗಳ ಮೇಲೆ ಗಣನೀಯ ಪ್ರಮಾಣದ ಒತ್ತು ನೀಡುವ ಜ್ಞಾನಶಾಸ್ತ್ರೀಯ ಸಂಪ್ರದಾಯದಿಂದ ಬಂದಿರುವ ಯಿನ್, ಈ ಎಲ್ಲಾ ನಾಲ್ಕು ಪರೀಕ್ಷೆಗಳಿಗೆ, ವಿನ್ಯಾಸದ ಹಂತದಲ್ಲಷ್ಟೇ ಅಲ್ಲದೆ ದತ್ತಾಂಶ ಸಂಗ್ರಹಣೆ, ವಿಶ್ಲೇಷಣೆ ಹಾಗೂ ಸಂಯೋಜನೆಯ ಹಂತಗಳಲ್ಲಿಯೂ ಸಹಾ ಕರ್ಯತಂತ್ರಗಳನ್ನು ಒದಗಿಸುತ್ತಾನೆ. ಮೆರಿಯಮ್ ಮತ್ತು ಸ್ಟೇಕ್‌ರಿಗೆ ವ್ಯತಿರಿಕ್ತವಾಗಿ ಈ ರಚನೆಗಳನ್ನು ಕುರಿತ ಅಧ್ಯಾಯವೊಂದನ್ನೇನು ಆತನು ಬರೆದಿಲ್ಲವಾದರೂ, ಆತನ ಆದ್ಯತೆಯು ಇಡೀ ಪುಸ್ತಕವನ್ನು ವ್ಯಾಪಿಸಿದೆ.

"ತ್ರಿಭುಜೀಕರಣ" ಎಂಬ ಅಧ್ಯಾಯವೊಂದಲ್ಲಿ ಸಂಗ್ರಹಿಸಲಾದ ದತ್ತಾಂಶದ ಮೌಲ್ಯೀಕರಣದ ಚರ್ಚಾ ವಿಷಯಗಳನ್ನು ಸ್ಟೇಕ್ ತರ್ಕಿಸುತ್ತಾನೆ. ದತ್ತಾಂಶದ ತ್ರಿಭುಜೀಕರಣಕ್ಕೆ ನಾಲ್ಕು ತಂತ್ರಗಳನ್ನು ಆತನು ನೀಡುತ್ತಾನೆ: ದತ್ತಾಂಶ ಮೂಲ ತ್ರಿಭುಜೀಕರಣ, ಸಂಶೋಧಕ ತ್ರಿಭುಜೀಕರಣ, ಸಿದ್ಧಾಂತ ತ್ರಿಭುಜೀಕರಣ ಹಾಗೂ ವಿಧಾನಾತ್ಮಕ ತ್ರಿಭುಜೀಕರಣ. ದತ್ತಾಂಶ ಮೌಲ್ಯೀಕರಣಕ್ಕೆ ಸಂಬAಧಿಸಿದAತೆ; "ನಮ್ಮ ವಿಷಯ ಅಧ್ಯಯನ ಕಾರ್ಯದಾದ್ಯಂತ 'ಇದು ಸರಿಯಿದೆಯೆ' ಎಂದು ನಾವು ವಿಸ್ಮಯಪಡುತ್ತೇವೆ. 'ವಿಷಯದ ಸಂಪೂರ್ಣ ಮತ್ತು ನಿಖರವಾದ ವಿವರಣೆಯನ್ನು ನಾವು ಸೃಜಿಸುತ್ತಿದ್ದೇವೆಯೇ?' ಎಂಬುದಷ್ಟೇ ಅಲ್ಲ, 'ನಮಗೆ ಬೇಕಿರುವ ವಿವರಣೆಗಳನ್ನು ನಾವು ಅಭಿವೃದ್ಧಿಪಡಿಸುತ್ತಿದ್ದೇವೆಯೇ?''' (ಸ್ಟೇಕ್, 1995, ಪು. 107) ಎಂಬ ಪ್ರಶ್ನೆಗಳನ್ನು ಆತನು ಮಂಡಿಸುತ್ತಾನೆ. ಈ ಅಧ್ಯಾಯದಲ್ಲಿ ಮೊದಲ ಸಲ ಆತನು ನಿಖರತೆ, ಪರ್ಯಾಯ ವಿವರಣೆಗಳು ಹಾಗೂ ಶಿಸ್ತಿನ ಬಗೆಗೆ ತನ್ನ ಕಾಳಜಿಯನ್ನು ತಿಳಿಯಪಡಿಸುತ್ತಾನೆ: "ನಿಖರತೆ ಮತ್ತು ಪರ್ಯಾಯ ವಿವರಣೆಗಳೆರಡರ ನಮ್ಮ ಹುಡುಕಾಟದಲ್ಲಿ ನಮಗೆ ಶಿಸ್ತಿನ ಅಗತ್ಯವಿದೆ. ಕೇವಲ ಅಂತಃಪ್ರಜ್ಞೆಯ ಮೇಲೆ ಅವಲಂಬಿತವಾಗದ ಶಿಷ್ಟಾಚಾರಗಳು ಮತ್ತು 'ಇದನ್ನು ಸೂಕ್ತ ರೀತಿಯಲ್ಲಿ ಪಡೆಯುವ' ಉತ್ತಮ ಉದ್ದೇಶದ ಅಗತ್ಯವಿದೆ." (ಸ್ಟೇಕ್, 1995, ಪು. 107). ಸಿಂಧುತ್ವದ ಬಗ್ಗೆ ಚರ್ಚಿಸುವಾಗ, ತನ್ನ ಅಂತಃಪ್ರಜ್ಞೆಯ ಹಾಗೂ ಅಭಿಪ್ರಾಯಾತ್ಮಕ ದೃಷ್ಟಿಕೋನವನ್ನು ಆತನು ತ್ಯಜಿಸುವಂತೆ ಕಾಣಿಸುತ್ತದೆ. ಆದರೆ ಈ ಕಾರ್ಯವಿಧಾನವು ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣೆಯಂತಹ ವಿಷಯ ಅಧ್ಯಯನ ವಿನ್ಯಾಸದ ಪ್ರತಿಯೊಂದು ಹಂತದ ಆತನ ವಿಧಾನದಲ್ಲಿ ವ್ಯಾಪಕವಾಗಿರುವಂತೆ ಕಂಡುಬರುವುದಿಲ್ಲ.

ಇದಲ್ಲದೆ, ಸ್ಟೇಕ್‌ನ ರಚನಾತ್ಮಕ ಜ್ಞಾನಶಾಸ್ತ್ರವು ಆತನ ದತ್ತಾಂಶ ಮೌಲ್ಯೀಕರಣದ ದೃಷ್ಟಿಕೋನದಲ್ಲಿ ತನ್ನಷ್ಟಕ್ಕೆ ತಾನೇ ಪ್ರಕಟವಾಗುತ್ತದೆ. ಇದು ಯಿನ್‌ನ (2002) ದೃಷ್ಟಿಕೋನಕ್ಕೆ ವಿರುದ್ಧವಾಗಿದೆ. "ಪ್ರತಿನಿಧಿಸಬೇಕಾದ ವಿಷಯಕ್ಕೆ ಅನೇಕ ಆಯಾಮಗಳು ಅಥವಾ ದೃಷ್ಟಿಕೋನಗಳಿರುತ್ತವೆಂದು ಬಹುತೇಕ ಗುಣಾತ್ಮಕ ಸಂಶೋಧಕರು ನಂಬುತ್ತಾರಾದರೂ, ಅತ್ಯುತ್ತಮವಾದ ದೃಷ್ಟಿಕೋನವನ್ನು ಯಾವುದೇ ವಿವಾದವಿಲ್ಲದೆ ಸ್ಥಿರೀಕರಿಸುವುದು

ಸಾಧ್ಯವಿಲ್ಲವೆಂಬುದನ್ನು ಸಹಾ ಅವರು ನಂಬುತ್ತಾರೆ" ಎಂಬುದು ಯಿನ್‌ನ ಅಭಿಪ್ರಾಯವಾಗಿದೆ (ಪು. 108). ನೈತಿಕ ಬಾಧ್ಯತೆಗಳ ಕಾರಣದಿಂದಾಗಿ ಗುಣಾತ್ಮಕ ಸಂಶೋಧಕರು "ತಪ್ಪು ನಿರೂಪಣೆ ಹಾಗೂ ಅಪಗ್ರಹಿಕೆಗಳನ್ನು (misunderstanding) ಕಡಿಮೆಮಾಡಬೇಕು" (ಪು. 109) ಎಂದು ಸಹ ಆತನು ಅಭಿಪ್ರಾಯ ಪಡುತ್ತಾನೆ. ಈ ಕನಿಷ್ಠತೆಯ ಉದ್ದೇಶಕ್ಕಾಗಿ ಸ್ಟೇಕ್ ಕೆಲವು ಶಿಷ್ಟಾಚಾರಗಳು ಹಾಗೂ ವಿಧಾನಗಳನ್ನು ಸೂಚಿಸುತ್ತಾನೆ. ಇವುಗಳು "ದತ್ತಾಂಶ ಸಂಗ್ರಹಣೆಯ ಸರಳ ಪುನರಾವರ್ತನೆಯ ಪ್ರಯತ್ನಗಳಿಂದಾಚೆಗಿನ ಪ್ರೇಕ್ಷಿತ (observed) ದತ್ತಾಂಶದ ಸಿಂಧುತ್ವವನ್ನು ಅನ್ವೇಷಿಸುವ ಪ್ರಯತ್ನಗಳಾಗಿರುತ್ತವೆ" (ಸ್ಟೇಕ್, 1995, ಪು. 109). ಸದಸ್ಯ ಪರಿಶೀಲನೆಯ ಜೊತೆಗೆ, ಈ ಶಿಷ್ಟಾಚಾರಗಳ ಮೂಲಕ "ಅಗತ್ಯವಿರುವ ದೃಢೀಕರಣವನ್ನು ಗಳಿಸುವ, ಅರ್ಥವಿವರಣೆಯಲ್ಲಿ ವಿಶ್ವಾಸವನ್ನು ಹೆಚ್ಚಿಸುವ ಸಮರ್ಥನೆಯೊಂದರ ಸಾಮಾನ್ಯತೆಯನ್ನು ಪ್ರದರ್ಶಿಸುವ" ಉದ್ದೇಶವನ್ನು ಸಂಶೋಧಕರು ಹೊಂದಿರುತ್ತಾರೆ (ಸ್ಟೇಕ್, 1995, ಪು. 112). ವಿಷಯಕ್ಕೆ ಸಂಬಂಧಿಸಿದ ಅತ್ಯಂತ ವಿಶ್ವಾಸಾರ್ಹ ಅರ್ಥವಿವರಣೆ ಅಥವಾ ಜ್ಞಾನವನ್ನು ಅವರು ಅನ್ವೇಷಿಸಬೇಕಾಗುತ್ತದೆ. ಇದನ್ನು ಯಿನ್ ಬಲವಾಗಿ ವಿರೋಧಿಸುತ್ತಾನೆ.

ದತ್ತಾಂಶ ಮೌಲ್ಯೀಕರಣಕ್ಕೆ ಸಂಬಂಧಿಸಿದಂತೆ ಮೆರಿಯಮ್‌ಳ ದೃಷ್ಟಿಕೋನವು ಆಕೆಯ ಜ್ಞಾನಶಾಸ್ತ್ರೀಯ ಬದ್ಧತೆಯನ್ನು ಸಹಾ ವಿವರಿಸುತ್ತದೆ. "ಗುಣಾತ್ಮಕ ಸಂಶೋಧನೆಯಲ್ಲಿ ಅಂತರ್ಗತವಾಗಿರುವ ಒಂದು ಕಲ್ಪನೆಯೇನೆಂದರೆ, ವಾಸ್ತವಿಕತೆಯೆಂಬುದು ಸಮಗ್ರವಾದುದು, ಬಹು ಆಯಾಮವುಳ್ಳದ್ದು ಮತ್ತು ಸದಾ ಬದಲಾಗುವಂತಹದ್ದು; ಇದು ಪರಿಮಾಣಾತ್ಮಕ ಸಂಶೋಧನೆಯಲ್ಲಿರುವಂತೆ ಪತ್ತೆ ಹಚ್ಚಿ, ವೀಕ್ಷಿಸಿ, ಮಾಪನಮಾಡಲು ಕಾಯುತ್ತಿರುವ ಏಕೈಕ, ಸ್ಥಿರ ಹಾಗೂ ವಸ್ತುನಿಷ್ಠ ವಿದ್ಯಮಾನವಲ್ಲ" (ಮೆರಿಯಮ್, 1998, ಪು. 202). ಈ ಕಲ್ಪನೆಯ ಹಿನ್ನೆಲೆಯಲ್ಲಿ ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯ ಕಲ್ಪನೆಗಳನ್ನು ಗುಣಾತ್ಮಕ ಸಂಶೋಧನೆಯು ಹೇಗೆ ಅಧ್ಯಯನಕ್ಕೊಳಪಡಿಸುತ್ತದೆ ಎಂಬುದನ್ನು ಮೆರಿಯಮ್ ವಿವರಿಸುತ್ತಾಳಲ್ಲದೆ, ಈ ಕಾರ್ಯವಿಧಾನವನ್ನು; ಪರಿಮಾಣಾತ್ಮಕ ಸಂಶೋಧನೆಯಲ್ಲಿ ಅಂತರ್ಗತವಾಗಿರುವ ಸಮಂಜಸ ಕಲ್ಪನೆಗಳ ಪಕ್ಕದಲ್ಲಿಟ್ಟು ನೋಡುತ್ತಾಳೆ. ಮೆರಿಯಮ್‌ಳ ದತ್ತಾಂಶ ಮೌಲ್ಯೀಕರಣ ಪರಿಕಲ್ಪನೆಯು ಸ್ಟೇಕ್‌ನ ಪರಿಕಲ್ಪನೆಗನುಸಾರವಾಗಿದೆ. "ಲೇಖಕನ ಅಂತಿಮ ನಿರ್ಧಾರವು 'ಅರ್ಥಪೂರ್ಣವಾದುದು' ಎಂಬುದನ್ನು ತೋರಿಸಲು ಗುಣಾತ್ಮಕ ಅಧ್ಯಯನವು ಓದುಗನಿಗೆ ಸಾಕಷ್ಟು ವಿವರವಾದ ಚಿತ್ರಣವನ್ನು ನೀಡುತ್ತದೆ" (ಮೆರಿಯಮ್, 1998, ಪು. 199), ಆ ಮೂಲಕ ಅವರ ಅರ್ಥವಿವರಣೆಯ ವಿಶ್ವಾಸಾರ್ಹತೆಯು ಹೆಚ್ಚಾಗುತ್ತದೆಂದು ಮೆರಿಯಮ್ ಅಭಿಪ್ರಾಯಪಡುತ್ತಾಳೆ.

ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯ ಪರಿಕಲ್ಪನೆಗಳನ್ನು ಮೊದಲಿಗೆ ನೈಸರ್ಗಿಕ ವಿಜ್ಞಾನಗಳಲ್ಲಿ ಪ್ರಕಟಿಸಲಾಯಿತು ಹಾಗೂ ಸಮಾಜ ವಿಜ್ಞಾನಗಳ

ಗುಣಾತ್ಮಕ ಸಂಶೋಧನೆಗೆ ಇವುಗಳನ್ನು ಎರವಲು ಪಡೆಯಲಾಯಿತು. ಆದ್ದರಿಂದ, ಗುಣಾತ್ಮಕ ಸಂಶೋಧನೆಗೆ ಆಧಾರವಾಗಿರುವ ರಚನಾತ್ಮಕ ಜ್ಞಾನಶಾಸ್ತ್ರದೊಂದಿಗೆ ಈ ಪದಗಳನ್ನು ಸಮನ್ವಯಗೊಳಿಸುವುದು ಗುಣಾತ್ಮಕ ವಿಧಾನಶಾಸ್ತ್ರಜ್ಞರಿಗೆ ಮುಳ್ಳಿನ ಹಾದಿಯಾಗಿದೆ. ಇದನ್ನು ಮೆರಿಯಮ್‌ಳ ಪಠ್ಯದಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ. ಸಂಪೂರ್ಣವಾಗಿ ವಿಭಿನ್ನವಾದ ಹಾಗೂ ವಿರುದ್ಧಾತ್ಮಕ ಜ್ಞಾನಶಾಸ್ತ್ರದಿಂದ ಬಂದ ಸಂಶೋಧಕರು ಕೈಗೊಳ್ಳುವ ಶೋಧನೆಯಲ್ಲಿ ದತ್ತಾಂಶ ಮೌಲ್ಯೀಕರಣ ಮಾನದಂಡವನ್ನು ಅನ್ವಯಿಸುವುದು “ಒಂದು ರೀತಿಯಲ್ಲಿ ಅಸಮರ್ಪಕವಾದುದು” ಎಂದು ಮೆರಿಯಮ್ ಅಭಿಪ್ರಾಯಪಡುತ್ತಾಳೆ. (ಮೆರಿಯಮ್, 1998, ಪು. 206). ಗುಣಾತ್ಮಕ ವಿಧಾನಶಾಸ್ತ್ರಜ್ಞರು ಈ ಕಲ್ಪನೆಗಳನ್ನು ಹೇಗೆ ಗ್ರಹಿಸುತ್ತಾರೆ ಹಾಗೂ ಯಾವ ಪರ್ಯಾಯಗಳನ್ನು ಅವರು ಪ್ರಸ್ತುತಪಡಿಸುತ್ತಾರೆಂಬುದರ ಸಾರಾಂಶವನ್ನು ಆಕೆ ನೀಡುತ್ತಾಳೆ. ಗುಣಾತ್ಮಕ ಸಂಪ್ರದಾಯದಲ್ಲಿ ಸಿಂಧುತ್ವ ಮತ್ತು ವಿಶ್ವಾಸಾರ್ಹತೆಗಳನ್ನು, ಅವುಗಳನ್ನು ಪರಿಕಲ್ಪಿಸಿರುವ ಅರ್ಥದಲ್ಲಿ ಉತ್ತಮ ಪಡಿಸಲು ಗುಣಾತ್ಮಕ ಸಂಶೋಧಕರು ಬಳಸಬಹುದಾದ ಕೌಶಲ್ಯಗಳು ಅಥವಾ ಕಾರ್ಯತಂತ್ರಗಳನ್ನು ಆಕೆಯು ಒದಗಿಸುತ್ತಾಳೆ. ಒಟ್ಟಿನಲ್ಲಿ ಹೇಳುವುದಾದರೆ, ಸ್ಟೇಕ್‌ಗೆ ಹೋಲಿಸಿದರೆ ದತ್ತಾಂಶ ಮೌಲ್ಯೀಕರಣವನ್ನು ಗುಣಾತ್ಮಕವಾಗಿ ಅರ್ಥಮಾಡಿಕೊಳ್ಳಲು ಬೇಕಾದ ಮತ್ತಷ್ಟು ಸಮಗ್ರವಾದ ಕಾರ್ಯವಿಧಾನವನ್ನು ಮೆರಿಯಮ್ ಪ್ರಸ್ತುತಪಡಿಸುತ್ತಾಳೆ. ಇದಕ್ಕೆ ಬದಲಾಗಿ, ಸ್ಟೇಕ್‌ನ ತ್ರಿಭುಜೀಕರಣದ ಚರ್ಚೆಯು ಮೆರಿಯಮ್‌ಳ ದತ್ತಾಂಶ ಮೌಲ್ಯೀಕರಣ ವಿಧಾನಕ್ಕೆ ಪೂರಕವಾಗಬಲ್ಲ ಏಕೈಕ ಭಾಗವಾಗಿದೆ. ಕೇವಲ ಗುಣಾತ್ಮಕ ವಿಷಯ ಅಧ್ಯಯನವನ್ನು ಕೈಗೊಳ್ಳಲು ಆಲೋಚಿಸುತ್ತಿರುವ ಅನನುಭವಿ ಸಂಶೋಧಕರು ಸ್ಟೇಕ್‌ನ ತ್ರಿಭುಜೀಕರಣದ ನಿರೂಪಣೆಯ ಜೊತೆಗೆ ಮೆರಿಯಮ್‌ಳ ಪಠ್ಯಪುಸ್ತಕವು ಒದಗಿಸುವ ವಿವರಣೆಗಳು ಹಾಗೂ ಮಾರ್ಗಸೂಚಿಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ.

## ಉಪಸಂಹಾರ

ಮೂರು ವಿಷಯ ಅಧ್ಯಯನ ಕಾರ್ಯವಿಧಾನಗಳನ್ನು; ಒಂದರ ಪಕ್ಕದಲ್ಲಿ ಒಂದನ್ನಿಟ್ಟು ಕೈಗೊಳ್ಳಲಾದ ಅಧ್ಯಯನವನ್ನು ಸಮಾಪ್ತಿಗೊಳಿಸುತ್ತಾ ಈ ಕಾರ್ಯವಿಧಾನಗಳ ಒಟ್ಟಾರೆ ಸಂಶ್ಲೇಷಣಾತ್ಮಕ ಮೌಲ್ಯಮಾಪನವನ್ನು ಒದಗಿಸುವ ಕೋಷ್ಟಕವೊಂದನ್ನು (ನೋಡಿ ಕೋಷ್ಟಕ 1) ನಾನಿಲ್ಲಿ ಪ್ರಸ್ತುತಪಡಿಸುತ್ತಿದ್ದೇನೆ.

# ಕೋಷ್ಟಕ -1 ಮೂರು ವಿಷಯ ಅಧ್ಯಯನ ಕಾರ್ಯವಿಧಾನಗಳ ಹೋಲಿಕೆ

| ಆಸಕ್ತಿಯ ಆಯಾಮ | ರಾಬರ್ಟ್ ಯಿನ್‌ನ 'Case Study Research: Design and Methods' | ರಾಬರ್ಟ್ ಸ್ಟೇಕ್‌ನ 'The Art of Case Study Research" | ಶರನ್ ಮೆರಿಯಮ್‌ನ 'Qualitative Research and Case Study Applications in Education'. |
|---|---|---|---|
| ಜ್ಞಾನಶಾಸ್ತ್ರೀಯ ಬದ್ಧತೆಗಳು | ಧನಾತ್ಮಕತೆ | ರಚನಾತ್ಮಕತೆ ಹಾಗೂ ಅಸ್ತಿತ್ವವಾದ (ಅನಿರ್ಣಾಯಕತೆ) | ರಚನಾತ್ಮಕತೆ |
| ವಿಷಯ ಮತ್ತು ವಿಷಯ ಅಧ್ಯಯನದ ವ್ಯಾಖ್ಯಾನ | **ವಿಷಯ:** "ವಾಸ್ತವ ಬದುಕಿನ ಸನ್ನಿವೇಶದಲ್ಲಿನ ಒಂದು ಸಮಕಾಲೀನ ವಿದ್ಯಮಾನ, ವಿಶೇಷವಾಗಿ, ವಿದ್ಯಮಾನ ಹಾಗೂ ಸನ್ನಿವೇಶದ ನಡುವಿನ ಎಲ್ಲೆಗಳು ಸ್ಪಷ್ಟವಾಗಿಲ್ಲದಿರುವಾಗ ಹಾಗೂ ಸಂಶೋಧಕನು ವಿದ್ಯಮಾನ ಮತ್ತು ಸನ್ನಿವೇಶದ ಮೇಲೆ ಯಾವುದೇ ನಿಯಂತ್ರಣವನ್ನು ಹೊಂದಿಲ್ಲದಿರುವಾಗ" (ಪು. 13).<br><br>**ವಿಷಯ ಅಧ್ಯಯನ:** ಆಸಕ್ತಿಯ ವಿದ್ಯಮಾನವನ್ನು ಕುರಿತಾದ "ಹೇಗೆ" ಮತ್ತು "ಏಕೆ" ಎಂಬ ಪ್ರಶ್ನೆಗಳನ್ನು ನಿರ್ವಹಿಸುವ ಮೂಲಕ ಮೇಲೆ ತಿಳಿಸಿದ ವ್ಯಾಖ್ಯಾನಕ್ಕೆ ಹೊಂದಿಕೆಯಾಗುವಂತಹ ವಿಷಯ ಅಥವಾ ವಿಷಯಗಳನ್ನು ತನಿಖೆಮಾಡುವ ಒಂದು ಪ್ರಾಯೋಗಿಕ ಶೋಧನೆ. ವಿಷಯ : "ಒಂದು ನಿರ್ದಿಷ್ಟ ಹಾಗೂ ಸಂಕೀರ್ಣವಾದ ಕಾರ್ಯಶೀಲ ಸಂಗತಿ." ಹೆಚ್ಚು ನಿರ್ದಿಷ್ಟವಾಗಿ, "ಎಲ್ಲೆ ಮತ್ತು ಕಾರ್ಯಾಚರಿಸುವ ಭಾಗಗಳನ್ನು" ಹೊಂದಿರುವ "ಒಂದು ಸಂಯೋಜಿತ ವ್ಯವಸ್ಥೆ" ಹಾಗೂ ಉದ್ದೇಶ | **ವಿಷಯ :** "ಒಂದು ನಿರ್ದಿಷ್ಟ ಹಾಗೂ ಸಂಕೀರ್ಣವಾದ ಕಾರ್ಯಶೀಲ ಸಂಗತಿ." ಹೆಚ್ಚು ನಿರ್ದಿಷ್ಟವಾಗಿ, "ಎಲ್ಲೆ ಮತ್ತು ಕಾರ್ಯಾಚರಿಸುವ ಭಾಗಗಳನ್ನು" ಹೊಂದಿರುವ "ಒಂದು ಸಂಯೋಜಿತ ವ್ಯವಸ್ಥೆ" ಹಾಗೂ ಉದ್ದೇಶ ಪೂರ್ವಕವಾದುದು (ಸಾಮಾಜಿಕ ವಿಜ್ಞಾನಗಳು ಹಾಗೂ ಮಾನವ ಸೇವೆಗಳಲ್ಲಿ) (ಪು. 2).<br><br>**ಗುಣಾತ್ಮಕ ವಿಷಯ ಅಧ್ಯಯನ:** "ಒಂದು ವಿಷಯದ ನಿರ್ದಿಷ್ಟತೆ ಮತ್ತು ಸಂಕೀರ್ಣತೆಯ ಅಧ್ಯಯನ ಹಾಗೂ ಅದರ ಚಟುವಟಿಕೆಯನ್ನು ಪ್ರಮುಖ ಸನ್ನಿವೇಶಗಳ ನಿಟ್ಟಿನಲ್ಲಿ ಅರ್ಥೈಸಿಕೊಳ್ಳುವುದು" (ಪು. xi).<br><br>**ಲಕ್ಷಣಗಳ ವ್ಯಾಖ್ಯಾನ:**<br><br>**ಸಮಗ್ರತೆ:** (ವಿದ್ಯಮಾನ ಹಾಗೂ ಅದರ ಸಂದರ್ಭಗಳ ಅಂತರ ಸಂಬಂಧವನ್ನು (interrelationship) ಪರಿಗಣಿಸುವುದು.) | **ವಿಷಯ:** "ಸುತ್ತಲೂ ಎಲ್ಲೆಗಳಿರುವ ಒಂದು ವಸ್ತು, ಅಸ್ತಿತ್ವ, ಅಥವಾ ಒಂದು ಘಟಕ" (ಪು. 27). ಇದು ಒಬ್ಬ ವ್ಯಕ್ತಿ, ಒಂದು ಕಾರ್ಯಕ್ರಮ, ಒಂದು ಗುಂಪು, ಒಂದು ನಿರ್ದಿಷ್ಟ ನೀತಿ ಇತ್ಯಾದಿಗಳಾಗಿರಬಹುದು.<br><br>**ಗುಣಾತ್ಮಕ ವಿಷಯ ಅಧ್ಯಯನ:**<br><br>"ಒಂದು ಕಾರ್ಯಕ್ರಮ, ಒಂದು ಸಂಸ್ಥೆ, ಒಬ್ಬ ವ್ಯಕ್ತಿ, ಒಂದು ಪ್ರಕ್ರಿಯೆ ಅಥವಾ ಒಂದು ಸಾಮಾಜಿಕ ಘಟಕದಂತಹ ಆವೃತ ವಿದ್ಯಮಾನದ ಗಾಢವಾದ ಸಮಗ್ರ ವಿವರಣೆ ಹಾಗೂ ವಿಶ್ಲೇಷಣೆ" (ಪು. xiii).<br><br>**ಲಕ್ಷಣಗಳ ವ್ಯಾಖ್ಯಾನ: ನಿರ್ದಿಷ್ಟಾತ್ಮಕತೆ:** (ನಿರ್ದಿಷ್ಟ ಸನ್ನಿವೇಶ, ಘಟನೆ, ಕಾರ್ಯಕ್ರಮ ಅಥವಾ ವಿದ್ಯಮಾನದತ್ತ ಗಮನವನ್ನು ಕೇಂದ್ರೀಕರಿಸುವುದು.)<br><br>ವಿವರಣಾತ್ಮಕ: ಅಧ್ಯಯನಕ್ಕೊಳಪಟ್ಟಿರುವ ವಿದ್ಯಮಾನದ ಸಮೃದ್ಧ ಹಾಗೂ ಗಾಢವಾದ ವಿವರಣೆ ನೀಡುವುದು.) |

| | | | |
|---|---|---|---|
| | ಪೂರ್ವಕವಾದುದು (ಸಾಮಾಜಿಕ ವಿಜ್ಞಾನಗಳು ಹಾಗೂ ಮಾನವ ಸೇವೆಗಳಲ್ಲಿ) (ಪು. 2). | **ಪ್ರಾಯೋಗಿಕ:** (ಅಧ್ಯಯನವನ್ನು ಕ್ಷೇತ್ರದಲ್ಲಿನ ವೀಕ್ಷಣೆಯ ಆಧಾರದಲ್ಲಿ ಕೈಗೊಳ್ಳುವುದು.) | |
| | | **ವ್ಯಾಖ್ಯಾನಾತ್ಮಕ:**<br><br>(ಅಂತಃಪ್ರಜ್ಞೆಯನ್ನು ಆಧರಿಸಿದ್ದು; ಸಂಶೋಧನೆಯನ್ನು ಮೂಲಭೂತವಾಗಿ ಸಂಶೋಧಕ ಹಾಗೂ ವಿಷಯದ ಪರಸ್ಪರ ಕ್ರಿಯೆಯಾಗಿ ಗ್ರಹಿಸುವುದು.)<br><br>**ಸುಸ್ಪಷ್ಟ (Emphatic):**<br><br>(ಪರಾನುಭೂತಿಯ ದೃಷ್ಟಿಕೋನದಲ್ಲಿ ಅಧ್ಯಯನಕ್ಕೊಳಪಟ್ಟವರ ಪ್ರಾತಿನಿಧಿಕ ಅನುಭವಗಳನ್ನು ಪ್ರತಿಬಿಂಬಿಸುವುದು.) | **ಅನ್ವೇಷಣಾತ್ಮಕ :**<br><br>(ಅಧ್ಯಯನಕ್ಕೊಳಪಟ್ಟಿರುವ ವಿದ್ಯಮಾನದ ಕುರಿತಾಗಿ ಓದುಗರು ಅರ್ಥಮಾಡಿಕೊಂಡಿರುವುದರ ಮೇಲೆ ಬೆಳಕು ಚೆಲ್ಲುವುದು). |

| | | | |
|---|---|---|---|
| ವಿಷಯ ಅಧ್ಯಯನದ ವಿನ್ಯಾಸ | **ವಿನ್ಯಾಸವು,** "ಪ್ರಾಯೋಗಿಕ ದತ್ತಾಂಶವನ್ನು ಅಧ್ಯಯನದ ಪ್ರಾರಂಭಿಕ ಸಂಶೋಧನಾ ಪ್ರಶ್ನೆಗಳು ಹಾಗೂ ಅಂತಿಮವಾಗಿ ಅದರ ನಿರ್ಣಯಗಳೊಂದಿಗೆ ಜೋಡಿಸುವ ತಾರ್ಕಿಕ ಅನುಕ್ರಮಕ್ಕೆ" ಸಂಬಂಧಿಸಿದೆ (ಪು. 20).<br><br>**ವಿಷಯ ಅಧ್ಯಯನದ ನಾಲ್ಕು ವಿಧಗಳು:** ಏಕ ಸಮಗ್ರತಾತ್ಮಕ ವಿನ್ಯಾಸ, ಏಕ ಅಂತಃಸ್ಥಾಪಿತ (Embedded) ವಿನ್ಯಾಸ, ಬಹು ಸಮಗ್ರತಾತ್ಮಕ ವಿನ್ಯಾಸ ಹಾಗೂ ಬಹು ಅಂತಃಸ್ಥಾಪಿತ (Embedded) ವಿನ್ಯಾಸ.<br><br>**ವಿಷಯ ಅಧ್ಯಯನ ವಿನ್ಯಾಸದ ಐದು ಅಂಗಗಳು:**<br><br>ಅಧ್ಯಯನದ ಪ್ರಶ್ನೆಗಳು ಹಾಗೂ ಅದರ ಪ್ರತಿಪಾದನೆಗಳೇನಾದರೂ ಇದ್ದಲ್ಲಿ, ಅದರ ವಿಶ್ಲೇಷಣೆಯ ಘಟಕಗಳು ಹಾಗೂ ಪ್ರತಿಪಾದನೆಗಳೊಂದಿಗೆ ದತ್ತಾಂಶದ ಸಂಬಂಧವನ್ನು ಕಲ್ಪಿಸುವ ತರ್ಕ ಹಾಗೂ ಫಲಿತಾಂಶಗಳನ್ನು ವ್ಯಾಖ್ಯಾನಿಸುವ ಮಾನದಂಡಗಳು. | **ನಮ್ಯ ವಿನ್ಯಾಸ:** ಸಂಶೋಧಕರು ವಿನ್ಯಾಸದಿಂದ ಸಂಶೋಧನೆಯ ಕಡೆಗೆ ಚಲಿಸಿದ ನಂತರವೂ ಪ್ರಮುಖ ಬದಲಾವಣೆಗಳನ್ನು ಮಾಡಿಕೊಳ್ಳಲು ಅನುವು ಮಾಡಿಕೊಡುತ್ತದೆ. "ವೀಕ್ಷಣೆ, ಸಂದರ್ಶನಗಳು ಹಾಗೂ ದಾಖಲೆ ಪರಿಶೀಲನೆಯ ಸಂರಚನೆಗೆ ಸಹಾಯವಾಗುವಂತಹ ಎರಡು ಅಥವಾ ಮೂರು ತೀಕ್ಷ್ಣವಾದ ಚರ್ಚಾವಿಷಯದ ಪ್ರಶ್ನೆಗಳು (ಸಂಶೋಧನಾ ಪ್ರಶ್ನೆಗಳು) ಸಂಶೋಧಕರಿಗೆ ಅವಶ್ಯ. (ಪು. 20). ಪಾರ್ಲೆಟ್ ಮತ್ತು ಹ್ಯಾಮ್ಮಿಲ್ಟನ್‌ರ (1972) ಕಲ್ಪನೆಯಾದ "ಪ್ರಗತಿಶೀಲ ಗಮನಹರಿಸುವಿಕೆಯ" ಮೇಲೆ ಆತನು ಅವಲಂಬಿತವಾಗಿದ್ದಾನೆ. ಇದು, "ಅಧ್ಯಯನದ ಮಾರ್ಗವನ್ನು ಮುಂಚಿತವಾಗಿಯೇ ಚಿತ್ರಿಸಲು ಸಾಧ್ಯವಿಲ್ಲ" ಎಂಬ ಕಲ್ಪನೆಯ ನಿಟ್ಟಿನಲ್ಲಿ ರಚಿತವಾಗಿದೆ (ಸ್ಟೇಕ್, 1998, ಪು. 22 ರಲ್ಲಿ ಉಲ್ಲೇಖಿಸಲಾಗಿದೆ). | ಸಾಹಿತ್ಯ ವಿಮರ್ಶೆಯು ಸಿದ್ಧಾಂತದ ಅಭಿವೃದ್ಧಿ ಹಾಗೂ ಸಂಶೋಧನಾ ವಿನ್ಯಾಸಕ್ಕೆ ಕೊಡುಗೆ ನೀಡುವ ಒಂದು ಅವಶ್ಯಕವಾದ ಹಂತವಾಗಿದೆ. ಸಾಹಿತ್ಯ ವಿಮರ್ಶೆಯಿಂದ ಹೊರಹೊಮ್ಮುವ ಸೈದ್ಧಾಂತಿಕ ಚೌಕಟ್ಟು, ಸಂಶೋಧನಾ ಪ್ರಶ್ನೆಗಳು ಹಾಗೂ ಮಹತ್ವದ ಅಂಶಗಳನ್ನು ರೂಪಿಸಲು ಸಹಾಯಮಾಡುತ್ತದೆ.<br><br>**ಸಂಶೋಧನಾ ವಿನ್ಯಾಸದ ಐದು ಹಂತಗಳು:**<br><br>ಸಾಹಿತ್ಯ ವಿಮರ್ಶೆಯನ್ನು ಕೈಗೊಳ್ಳುವುದು, ಸೈದ್ಧಾಂತಿಕ ಚೌಕಟ್ಟೊಂದನ್ನು ನಿರ್ಮಿಸುವುದು, ಸಂಶೋಧನಾ ಸಮಸ್ಯೆಯನ್ನು ಗುರುತಿಸುವುದು, ಸಂಶೋಧನಾ ಪ್ರಶ್ನೆಗಳನ್ನು ರಚಿಸುವುದುಮತ್ತು ತೀಕ್ಷ್ಣಗೊಳಿಸುವುದು ಹಾಗೂ ಮಾದರಿಯ ಆಯ್ಕೆ (ಉದ್ದೇಶಿತ ಮಾದರಿಯ ಆಯ್ಕೆ). |

| | | | |
|---|---|---|---|
| ದತ್ತಾಂಶವನ್ನು ಸಂಗ್ರಹಿಸುವುದು | ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಸಾಕ್ಷ್ಯಾಧಾರ ಮೂಲಗಳನ್ನು ಒಗ್ಗೂಡಿಸತಕ್ಕದ್ದು.<br><br>ದತ್ತಾಂಶ ಸಂಗ್ರಹಣೆಯು, ಈ ಕೆಳಕಂಡವುಗಳಿಂದ ಪ್ರಭಾವಿಸಲ್ಪಟ್ಟಿದೆ: ವಿಷಯ ಅಧ್ಯಯನ ಸಂಶೋಧಕನ ಕೌಶಲ್ಯಗಳು, ನಿರ್ದಿಷ್ಟ ವಿಷಯ ಅಧ್ಯಯನಕ್ಕೆ ತರಬೇತಿ, ಶೋಧನೆಗೆ ಅವಶ್ಯವಿರುವ ಶಿಷ್ಟಾಚಾರದ ವರ್ಧನೆ, ವಿಷಯ ಅಧ್ಯಯನ ನಾಮನಿರ್ದೇಶನಗಳ ವೀಕ್ಷಣೆ (ವಿಷಯದ ಆಯ್ಕೆಗೆ ಸಂಬಂಧಿಸಿದಂತೆ ಅಂತಿಮ ನಿರ್ಧಾರವನ್ನು ಕೈಗೊಳ್ಳುವುದು) ಹಾಗೂ ಪ್ರಾಯೋಗಿಕ ಅಧ್ಯಯನದ ಕೈಗೊಳ್ಳುವಿಕೆ.<br><br>**ವಿಷಯ ಅಧ್ಯಯನ ಸಂಶೋಧಕರು ಆರು ದತ್ತಾಂಶ ಸಂಗ್ರಹಣಾ ಸಾಧನಗಳನ್ನು ಬಳಸುತ್ತಾರೆ:** ದಾಖಲೀಕರಣ, ಪುರಾತತ್ವ ದಾಖಲೆಗಳು, ಸಂದರ್ಶನಗಳು, ನೇರ ವೀಕ್ಷಣೆಗಳು, ಭಾಗವಹಿಸುವವರ ವೀಕ್ಷಣೆ ಹಾಗೂ ಭೌತಿಕ ಹಸ್ತಕೃತಿಗಳು (artifacts). | ಕೇವಲ ಗುಣಾತ್ಮಕ ದತ್ತಾಂಶ ಮೂಲಗಳ ಬಳಕೆ.<br><br>ಗುಣಾತ್ಮಕ ವಿಷಯ ಅಧ್ಯಯನ ಸಂಶೋಧಕರು; "ಮಹತ್ವಪೂರ್ಣ ತಿಳುವಳಿಕೆಗೆ ಯಾವುದು ಕಾರಣವಾಗುತ್ತದೆಂದು ತಿಳಿದುಕೊಳ್ಳುವುದು, ದತ್ತಾಂಶದ ಉತ್ತಮ ಮೂಲಗಳನ್ನು ಗುರುತಿಸುವುದು ಹಾಗೂ ಪ್ರಜ್ಞಾಪೂರ್ವಕವಾಗಿ ಮತ್ತು ಪ್ರಜ್ಞಾರಹಿತವಾಗಿ ಅವರ ದೃಷ್ಟಿಯ ವಿಶ್ವಾಸಾರ್ಹತೆಯನ್ನು ಹಾಗೂ ಅವರ ಅರ್ಥವಿವರಣೆಗಳ ದೃಢತೆಯನ್ನು ಪರೀಕ್ಷಿಸುವುದು ಅವಶ್ಯ. ಇದಕ್ಕೆ ಸೂಕ್ಷ್ಮಮತೆ ಹಾಗೂ ಸಂದೇಹವಾದದ ಅಗತ್ಯವಿದೆ" (ಸ್ಟೇಕ್, 1995, ಪು. 50).<br><br>ಗುಣಾತ್ಮಕ ವಿಷಯ ಅಧ್ಯಯನ ಸಂಶೋಧಕರು; ವೀಕ್ಷಣೆ, ಸಂದರ್ಶನ ಹಾಗೂ ದಾಖಲೆಯ ವಿಮರ್ಶೆಯನ್ನು ದತ್ತಾಂಶ ಸಂಗ್ರಹಣೆಯ ಸಾಧನಗಳಾಗಿ ಬಳಸುತ್ತಾರೆ. | ಕೇವಲ ಗುಣಾತ್ಮಕ ದತ್ತಾಂಶ ಮೂಲಗಳ ಬಳಕೆ.<br><br>ಗುಣಾತ್ಮಕ ವಿಷಯ ಅಧ್ಯಯನ ಸಂಶೋಧಕರು ಅಗತ್ಯವಿರುವ ಕೌಶಲ್ಯಗಳನ್ನು ಪಡೆದು, ಪರಿಣಾಮಕಾರಿ ಸಂದರ್ಶನಗಳನ್ನು ನಡೆಸಲು ಹಾಗೂ ಎಚ್ಚರಿಕೆಯ ವೀಕ್ಷಣೆಗಳನ್ನು ಮತ್ತು ದಾಖಲೆಗಳಿಂದ ದತ್ತಾಂಶವನ್ನು ಪಡೆದುಕೊಳ್ಳಲು ಕೆಲವು ನಿರ್ದಿಷ್ಟ ವಿಧಾನಗಳನ್ನು ಅನುಸರಿಸತಕ್ಕದ್ದು.<br><br>**ಗುಣಾತ್ಮಕ ವಿಷಯ ಅಧ್ಯಯನ ಸಂಶೋಧಕರು ಮೂರು ದತ್ತಾಂಶ ಸಂಗ್ರಹಣೆಯ ತಂತ್ರಗಳನ್ನು ಬಳಸುತ್ತಾರೆ:** ಸಂದರ್ಶನಗಳನ್ನು ಕೈಗೊಳ್ಳುವುದು, ವೀಕ್ಷಣೆ ಹಾಗೂ ದಾಖಲೆಗಳ ವಿಶ್ಲೇಷಣೆ. |

| | | | |
|---|---|---|---|
| ದತ್ತಾಂಶ ವಿಶ್ಲೇಷಣೆ | ದತ್ತಾಂಶ ವಿಶ್ಲೇಷಣೆಯು, "ಅಧ್ಯಯನದ ಪ್ರಾರಂಭಿಕ ಪ್ರತಿಪಾದನೆಗಳನ್ನು ಚರ್ಚಿಸಲು; ಪರಿಶೀಲನೆ, ವರ್ಗೀಕರಣ, ಪಟ್ಟೀಕರಣ, ಪರೀಕ್ಷೆ ಅಥವಾ ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಪುರಾವೆಗಳೆರಡನ್ನೂ ಪುನರ್ ಸಂಯೋಜಿಸುವುದನ್ನು ಒಳಗೊಂಡಿದೆ" (ಪು. 109).<br><br>**ದತ್ತಾಂಶ ವಿಶ್ಲೇಷಣೆಯ ಐದು ಪ್ರಬಲ ತಂತ್ರಗಳು:**<br><br>ಮಾದರಿಯ ಹೊಂದಾಣಿಕೆ, ಸ್ಪಷ್ಟೀಕರಣದ ರಚನೆ, ಸಮಯ ಶ್ರೇಣಿಯ ವಿಶ್ಲೇಷಣೆ, ಕಾರ್ಯಕ್ರಮದ ತಾರ್ಕಿಕ ಮಾದರಿಗಳು ಹಾಗೂ ಅಡ್ಡ– ವಿಷಯದ ಸಂಶ್ಲೇಷಣೆ. | ದತ್ತಾಂಶ ವಿಶ್ಲೇಷಣೆಯು "ಮೊದಲ ಅಭಿಪ್ರಾಯಗಳು ಹಾಗೂ ಅಂತಿಮ ಕ್ರೋಢೀಕರಣಗಳಿಗೆ ಅರ್ಥವನ್ನು ನೀಡುವ ವಿಷಯವಾಗಿದೆ" (ಪು. 71).<br><br>ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣೆಯ ಏಕಕಾಲಿಕತೆ.<br><br>**ದತ್ತಾಂಶ ವಿಶ್ಲೇಷಣೆಯ ಎರಡು ಕಾರ್ಯತಂತ್ರ ಮಾರ್ಗಗಳು:** ವರ್ಗೀಕೃತ ಸಮಗ್ರತೆ ಹಾಗೂ ಪ್ರತ್ಯಕ್ಷ ಅರ್ಥ ವಿವರಣೆ.<br><br>"ಪ್ರತಿಯೊಬ್ಬ ಸಂಶೋಧಕನಿ/ಳಿಗೆ ತನಗೆ ಸರಿಹೊಂದುವAತಹ ವಿಶ್ಲೇಷಣಾ ರೂಪಗಳನ್ನು ಅನುಭವ ಮತ್ತು ಪರ್ಯಾಲೋಚನೆಯ ಮೂಲಕ ಕಂಡುಕೊಳ್ಳುವ ಅಗತ್ಯವಿದೆ" (ಪು. 77). | ದತ್ತಾಂಶ ವಿಶ್ಲೇಷಣೆಯು "ದತ್ತಾಂಶದಲ್ಲಿ ಅರ್ಥವನ್ನು ಹುಡುಕುವ ಪ್ರಕ್ರಿಯೆಯಾಗಿದೆ. ಇದು ಜನರು ಹೇಳಿರುವುದನ್ನು ಹಾಗೂ ಸಂಶೋಧಕನು ನೋಡಿರುವ ಮತ್ತು ಓದಿರುವುದರ ಕ್ರೋಢೀಕರಣ, ಸಂಕ್ಷಿಪ್ತಗೊಳಿಸುವಿಕೆ ಹಾಗೂ ವ್ಯಾಖ್ಯಾನಿಸುವಿಕೆಯನ್ನು ಒಳಗೊಂಡಿದ್ದು, ಅರ್ಥೈಸುವ ಪ್ರಕ್ರಿಯೆಯಾಗಿದೆ" (ಪು. 178).<br><br>ದತ್ತಾಂಶ ಸಂಗ್ರಹಣೆ ಹಾಗೂ ವಿಶ್ಲೇಷಣೆಯ ಏಕಕಾಲಿಕತೆ<br><br>**ಆರು ವಿಶ್ಲೇಷಣಾ ಕಾರ್ಯತಂತ್ರಗಳು :**<br><br>ಜನಾಂಗೀಯ ವಿಶ್ಲೇಷಣೆ, ನಿರೂಪಣೆಯ ವಿಶ್ಲೇಷಣೆ, ವಿದ್ಯಮಾನೀಯ ವಿಶ್ಲೇಷಣೆ, ಸ್ಥಿರ ತುಲನಾತ್ಮಕ ವಿಧಾನ, ವಿಷಯ ವಿಶ್ಲೇಷಣೆ ಹಾಗೂ ವಿಶ್ಲೇಷಣಾತ್ಮಕ ಪ್ರವೇಶ. |
| ದತ್ತಾಂಶ ಮೌಲ್ಯೀಕರಣ | ಷಯ ಅಧ್ಯಯನ ಸಂಶೋಧಕರು ರಚನಾ ಸಿಂಧುತ್ವವನ್ನು ಖಾತರಿಪಡಿಸಿಕೊಳ್ಳುವುದು ಅವಶ್ಯ. (ಬಹುಮೂಲಗಳ ಸಾಕ್ಷಿಗಳು, ಸಾಕ್ಷಿಗಳ ಸರಣಿಗಳು ಹಾಗೂ ಸದಸ್ಯ ಪರಿಶೀಲನೆಯ ತ್ರಿಭುಜೀಕರಣದ ಮೂಲಕ).<br><br>**ಆಂತರಿಕ ಸಿಂಧುತ್ವ** (ಮಾದರಿ ಹೊಂದಾಣಿಕೆಯಂತಹ ಸ್ಥಾಪಿತ ವಿಶ್ಲೇಷಣಾ ವಿಧಾನಗಳ ಮೂಲಕ).<br><br>**ಬಾಹ್ಯ ಸಿಂಧುತ್ವ :** (ವಿಶ್ಲೇಷಣಾ ಸಾಮಾನ್ಯೀಕರಣದ ಮೂಲಕ) ಹಾಗೂ **ವಿಶ್ವಾಸಾರ್ಹತೆ** (ವಿಷಯ | ತ್ರಿಭುಜೀಕರಣದ ಕಲ್ಪನೆಯು ದತ್ತಾಂಶ ಮೌಲ್ಯೀಕರಣದ ಚರ್ಚಾವಿಷಯಗಳನ್ನು ಒಳಗೊಂಡಿದೆ.<br><br>**ತ್ರಿಭುಜೀಕರಣದ ನಾಲ್ಕು ಕಾರ್ಯತಂತ್ರಗಳು:**<br>ದತ್ತಾಂಶ ಮೂಲ ತ್ರಿಭುಜೀಕರಣ,<br><br>ಸಂಶೋಧಕನ ತ್ರಿಭುಜೀಕರಣ ಸಿದ್ಧಾಂತ, ತ್ರಿಭುಜೀಕರಣ ಹಾಗೂ ವಿಧಾನಾತ್ಮಕ ತ್ರಿಭುಜೀಕರಣ. | ಗುಣಾತ್ಮಕ ವಿಶ್ಲೇಷಣೆಯು ಸಂಶೋಧನೆಯಲ್ಲಿ ಸೃಜಿತಗೊಂಡ ಜ್ಞಾನದ ಸಿಂಧುತ್ವ ಹಾಗೂ ವಿಶ್ವಾಸಾರ್ಹತೆಯನ್ನು ವಿಭಿನ್ನವಾಗಿ ಅನುಸಂಧಾನ ಮಾಡುತ್ತದೆ.<br><br>**ಆಂತರಿಕ ಸಿಂಧುತ್ವವನ್ನು ವರ್ಧಿಸುವ ಆರು ಕಾರ್ಯತಂತ್ರಗಳು:**<br><br>ತ್ರಿಭುಜೀಕರಣ, ಸದಸ್ಯ ಪರಿಶೀಲನೆಗಳು, ದೀರ್ಘಾವಧಿ ವೀಕ್ಷಣೆ, ಸಹಪಾಠಿ ಪರೀಕ್ಷೆ, ಪಾಲ್ಗೊಳ್ಳುವಿಕೆಯ ಸಂಶೋಧನೆ ಹಾಗೂ ಸಂಶೋಧನಾ ಪೂರ್ವಗ್ರಹವನ್ನು ಬಹಿರಂಗಪಡಿಸುವಿಕೆ. |

| | | | |
|---|---|---|---|
| | ಅಧ್ಯಯನ ಶಿಷ್ಟಾಚಾರಗಳು ಹಾಗೂ ದತ್ತಸಂಚಯಗಳ ಮೂಲಕ). | | **ವಿಶ್ವಾಸಾರ್ಹತೆಯನ್ನು ಖಾತರಿಪಡಿಸಿಕೊಳ್ಳುವ ಮೂರು ತಂತ್ರಗಳು:**<br><br>ಅಧ್ಯಯನಕ್ಕೆ ಸಂಬಂಧಿಸಿದಂತೆ ಸಂಶೋಧಕನ ಸ್ಥಾನ, ತ್ರಿಭುಜೀಕರಣ ಹಾಗೂ ಪ್ರಾಯೋಗಿಕ ಲೆಕ್ಕ ಪರಿಶೋಧನೆಯ ಬಳಕೆ.<br><br>**ಬಾಹ್ಯ ಸಿಂಧುತ್ವವನ್ನು ವರ್ಧಿಸುವ ಮೂರು ತಂತ್ರಗಳು:** ಆಳವಾದ ವಿವರಣೆಯ ಬಳಕೆ, ವಿಶಿಷ್ಟತೆ ಅಥವಾ ವಿಹಿತಕ್ರಮದ (modal) ವರ್ಗಗಳು ಹಾಗೂ ಬಹು-ಪ್ರದೇಶ ವಿನ್ಯಾಸಗಳು. |

ಆಕಾಂಕ್ಷಿಗಳಾದ ಸಂಶೋಧಕರು, ತಮ್ಮ ಆಸಕ್ತಿಯ ವಿದ್ಯಮಾನ ಹಾಗೂ ಸಂಶೋಧನಾ ಪ್ರಶ್ನೆ ಅಥವ ಪ್ರಶ್ನೆಗಳಿಗೆ ಸಂಬಂಧಿಸಿದಂತೆ ನಿರ್ಧಾರವನ್ನು ಕೈಗೊಂಡ ನಂತರ ಅಥವಾ ನಿರ್ಧರಿಸುವ ಪ್ರಕ್ರಿಯೆಯಲ್ಲಿರುವಾಗ, ಅಧ್ಯಯನವನ್ನು ಕೈಗೊಳ್ಳಲು, ಸಂಶೋಧನಾ ವಿಧಾನವೊಂದನ್ನು ಹುಡುಕುತ್ತಿರುತ್ತಾರೆ. ಅವರು ವಿಷಯ ಅಧ್ಯಯನವನ್ನು ಆಯ್ಕೆ ಮಾಡಿಕೊಂಡಲ್ಲಿ, ಬಹು ಕಾರ್ಯವಿಧಾನಗಳು ಹಾಗೂ ವೈವಿಧ್ಯಮಯ ದೃಷ್ಟಿಕೋನಗಳಿಂದ ಕೂಡಿದ ವಿವಾದಿತ ಕ್ಷೇತ್ರವೊಂದನ್ನು ಅವರು ಎದುರುಗೊಳ್ಳುತ್ತಾರೆ. ಈ ಕ್ಷೇತ್ರದಲ್ಲಿ ಅವರು ಮುನ್ನಡೆಯಲು ಸಹಾಯಮಾಡುವ ಪ್ರಾಥಮಿಕ ಉದ್ದೇಶವನ್ನು ಹೊಂದಿರುವ ಈ ಪ್ರಸ್ತುತ ಲೇಖನವು, ಸಾಮಾನ್ಯ ವಿಷಯ ಅಧ್ಯಯನ ಪಠ್ಯಪುಸ್ತಕಗಳಿಗಿಂತಲೂ ವಿಭಿನ್ನವಾದ ಮೂರು ಮುಖ್ಯ ರೀತಿಗಳಲ್ಲಿ ಅವರಿಗೆ ನೆರವಾಗಬಹುದು. ಮೊದಲಿಗೆ, ಅನನುಭವಿ ವಿಷಯ ಅಧ್ಯಯನ ಸಂಶೋಧಕರು ಅವರ ಜ್ಞಾನಶಾಸ್ತ್ರೀಯ ದೃಷ್ಟಿಕೋನಗಳು ಹಾಗೂ ಅವರ ಆದ್ಯತೆಯ ವಿಷಯ ಅಧ್ಯಯನ ಕಾರ್ಯವಿಧಾನಗಳ ನಡುವಿನ ಸಂಬಂಧವನ್ನು ಅರ್ಥಮಾಡಿಕೊಳ್ಳುತ್ತಾರೆ. ಅಂದರೆ, ಅವರ ಸಂಶೋಧನಾ ಸಂಬಂಧಿತ ನಿರ್ಧಾರಗಳು ಅವರು ಶೈಕ್ಷಣಿಕ ಸಂಶೋಧಕರಾಗಿ ಹೊರಹೊಮ್ಮುತ್ತಿರುವ ಗುರುತುಗಳನ್ನು ಸ್ಪಷ್ಟಪಡಿಸುತ್ತವೆಯೆಂಬುದನ್ನು ಅರ್ಥಮಾಡಿಕೊಳ್ಳುತ್ತಾರೆ. ಎರಡನೆಯದಾಗಿ, ಈ ಅನನುಭವಿ ಸಂಶೋಧಕರು ಅನುಭವಿಸಿದಂಥದೇ ಪ್ರಕ್ರಿಯೆಗೆ (ವಿಷಯ ಅಧ್ಯಯನ ಸಂಶೋಧನೆಯ ವಿನ್ಯಾಸ ಹಾಗೂ ಅದನ್ನು ಕೈಗೊಳ್ಳುವಿಕೆ) ಒಳಪಟ್ಟಿರುವ ಮತ್ತೊಬ್ಬ ಅನನುಭವಿ ವಿಷಯ ಅಧ್ಯಯನ ಸಂಶೋಧಕನ ದೃಷ್ಟಿಕೋನಗಳನ್ನು ಅವರು ನೋಡಲಿದ್ದಾರೆ. ಮೂರನೆಯದಾಗಿ, ಈ ಲೇಖನದಲ್ಲಿ ವಿವಿಧ ವಿಷಯ ಅಧ್ಯಯನ

ಕಾರ್ಯವಿಧಾನಗಳಿಗೆ ಸರಿಹೊಂದುವ ಅಥವಾ ಬೆಂಬಲವಾಗುವ ಅಂಶಗಳನ್ನು (ಉದಾಹರಣೆಗೆ, ವಿಭಿನ್ನ ಸಂಶೋಧನಾ ಕೌಶಲಗಳು ಹಾಗೂ ಕಾರ್ಯತಂತ್ರಗಳು) ಆಯ್ಕೆಮಾಡಿಕೊಂಡು ಒಟ್ಟುಗೂಡಿಸುವ ಅವಕಾಶ ಅವರಿಗಿರುತ್ತದೆ. ಆದ್ದರಿಂದ ವಿಷಯ ಅಧ್ಯಯನ ವಿಧಾನಗಳ ಮೂರು ವಿಭಿನ್ನ ನಿರೂಪಣೆಗಳ ಈ ತುಲನಾತ್ಮಕ ವಿಶ್ಲೇಷಣೆಯು; ಉದಯೋನ್ಮುಖ ಸಂಶೋಧಕರು, ಸಂಶೋಧನಾ ಯೋಜನೆಗಳನ್ನು ಪರಿಕಲ್ಪಿಸುತ್ತಿರುವಾಗ ಹಾಗೂ ವಿನ್ಯಾಸಗೊಳಿಸುತ್ತಿರುವಾಗ ಅವರ ತಕ್ಷಣದ ಪರಾಮರ್ಶೆಗೆ ನೆರವಾಗಲಿದೆ.

## ಉಲ್ಲೇಖಗಳು


Baxter, P., & Jack, S. (2008). Qualitative case study methodology: Study design and implementation for novice researchers. *The Qualitative Report*, *13*(4), 544-559. Retrieved from http://www.nova.edu/ssss/QR/QR13-4/baxter.pdf

Creswell, J. W., Hanson, W. E., Plano, V. L. C., & Morales, A. (2007). Qualitative research designs selection and implementation. *The Counseling Psychologist*, *35*(2), 236-264.

Crotty, M. (1998). *The foundations of social research*. Thousand Oaks, CA: SAGE Publications.

Merriam, S. B. (1998). *Qualitative research and case study applications in education*. San Francisco, CA: Jossey-Bass.

Miles, M. B., & Huberman, A. M. (1994). *Qualitative data analysis: An expanded sourcebook*. Thousand Oaks, CA: SAGE Publications.

Parlett, M., & Hamilton, D. (1976). Evaluation as illumination: A new approach to the study of innovative programmes. In G. Glass (Ed.), *Evaluation studies review annual*, *I* (pp. 140-157). Beverly Hills, CA: SAGE Publications.

Smith, L. (1978). An evolving logic of participant observation, educational ethnography, and other case studies. In L. Shulman (Ed.), *Review of researching education* (pp. 316-377). Itasca, IL: F. E. Peacock.

Stake, R. E. (1995). *The art of case study research*. Thousand Oaks, CA: SAGE Publications.

Tellis, W. (1997a). Introduction to case study [68 paragraphs]. *The Qualitative Report*, *3*(2). Retrieved from http://www.nova.edu/ssss/QR/QR3-2/tellis1.html

Tellis, W. (1997b). Application of a case study methodology [81 paragraphs]. *The Qualitative Report*, *3*(3). Retrieved from http://www.nova.edu/ssss/QR/QR3-3/tellis2.html.

Yin, R. K. (2002). *Case study research: Design and methods*. Thousand Oaks, CA: SAGE Publications.


## ಲೇಖಕನ ಟಿಪ್ಪಣಿ


ಬೆಡ್ರೆಟ್ಟಿನ್ ಯಜನ್, ಅಲಬಾಮ ವಿಶ್ವವಿದ್ಯಾನಿಲಯ, ಟುಸ್ಕಲೂಸಾದ ಪಠ್ಯಕ್ರಮ ಹಾಗೂ ಬೋಧನಾ ವಿಭಾಗದಲ್ಲಿ (Department of Curriculum and Instruction) ಸಹಾಯಕ ಪ್ರಾಧ್ಯಾಪಕರಾಗಿದ್ದಾರೆ. ಅವರ ಸಂಶೋಧನಾ ಆಸಕ್ತಿಗಳು, ಭಾಷಾ ಶಿಕ್ಷಕನ ಅಸ್ಮಿತೆ, ವಿಷಯ ಅಧ್ಯಯನ ವಿಧಾನ,

ಅಂತಾರಾಷ್ಟ್ರೀಯ ಭಾಷೆಯಾಗಿ ಇಂಗ್ಲಿಷ್, ESL (English as Second Language) ಹಾಗೂ ಮುಖ್ಯವಾಹಿನಿ ಶಿಕ್ಷಕರ ನಡುವಿನ ಸಹಯೋಗ, ಮತ್ತು ದ್ವಿತೀಯ ಬಾಷೆಯ ಅರ್ಜನೆಯಲ್ಲಿ ಸಾಮಾಜಿಕ-ಸಾಂಸ್ಕೃತಿಕ ಸಿದ್ಧಾಂತಗಳನ್ನು ಒಳಗೊಂಡಿವೆ. ಈ ಲೇಖನದ ಬಗೆಗಿನ ಪತ್ರವ್ಯವಹಾರಗಳನ್ನು ನೇರವಾಗಿ ಈ ಮೂಲಕ ಮಾಡಬಹುದು. Bedrettin Yazan at, 223B Graves Hall, Unviersity of Alabama, Tuscaloosa, Alabama 35487 curriculum or via E-mail at byazan@bamaed.ua.edu.